# ಮನ್ನಣೆ

ಇದೀಗ ವಾಚಕರ ಕೈ ಸೇರುವ ನನ್ನ "ವೈದ್ಯರಾಜ" ನಾಟಕ ವನ್ನು ಅಚ್ಚು ಹಾಕಿಸಿ ಪ್ರಸಿದ್ಧಪಡಿಸುವ ಶ್ರೇಯಸ್ಸು ಧಾರವಾಡ ಕರ್ನಾಟಕ ಆರ್ಟ್ಸ ಕಾಲೇಜದ ನಾಟ್ಯ ಸಂಘದವರದು. ಈ ನಾಟಕ ವನ್ನು ತಾ॥ ೧೮-೯-೩೧ ಸ ರಾತ್ರಿ ಮೊದಲು ಆಡಿ ತೋರಿಸಿ ಸಾಹಸ ದಿಂದ ನನ್ನನ್ನು ಪ್ರೋತ್ಸಾಹಿಸಿದವರೂ ಆ ಸಂಘದವರೆ. ಇದಲ್ಲದೆ ಉಚ್ಚ ತರಗತಿಯ ನಾಟಕಗಳನ್ನು ಪ್ರಸಿದ್ಧಿಸಲು ಹಣದ ಸಹಾಯ ವನ್ನು ನೀಡಬೇಕೆಂದು ಗೊತ್ತುಪಡಿಸಿಕೊಂಡು ಆ ಮೇರೆಗೆ ಈ ನಾಟಕವನ್ನೆ ಮೊದಲು ಪ್ರಸಿದ್ಧಪಡಿಸಿದ ಸನ್ಮಾನಕ್ಕಾಗಿ ನಾನು ಸಂಘದವರಿಗೆ ಕೃತಜ್ಞನಿರುವೆ. ಇದಲ್ಲದೆ ಈ ನಾಟಕದ ಕೆಲವು ಪ್ರತಿ ಗಳನ್ನು ಕಾಣಿಕೆಯಾಗಿ ಸಂಘಕ್ಕೆ ಮರುಳಿಸಲು ಅಪ್ಪಣೆ ಕೊಟ್ಟು ಗೌರವಿಸಿದ್ದಕ್ಕಾಗಿ ಸಂಘದ ಅಧ್ಯಕ್ಷರಾದ **ಪ್ರೊ. ಎ. ಡಿ. ಧೋಪೇಶ್ವರಕರ**, ಕಾರ್ಯದರ್ಶಿಗಳಾದ **ಶ್ರೀ. ಎಸ್. ಎಸ್. ಮಾಳವಾಡ** ಇವರಿಗೆ ನನ್ನ ಆದರದ ಮನ್ನಣೆಗಳು.

ಇಷ್ಟೊಂದು ಅನುಕೂಲತೆ ಒದಗಿದಲ್ಲಿಯೂ ಅಚ್ಚು ಹಾಕಿಸುವ ಶ್ರಮವನ್ನು ವಹಿಸಿ ಅದನ್ನು ಅಷ್ಟೊಂದು ಜಾಣತನದಿಂದ ಕೈಗೂಡಿ ಸಿದವರು ನನ್ನ ಮಿತ್ರರಾದ **ಶ್ರೀ. ಗುಂಜೀ ಧೀರೇಂದ್ರರಾಯರು**, ಅವರ ತಮ್ಮಂದಿರಾದ **ಶ್ರೀ. ರಾಮಚಂದ್ರರಾಯರು**, ಮತ್ತು **ಶ್ರೀ. ಅಳವಣಿ ನಾರಾಯಣರಾಯರು**. ಇವರ ಉತ್ಸಾಹ, ಪ್ರೋತ್ಸಾಹ, ಪರಿಶ್ರಮ ಇವುಗಳಿಗಾಗಿ ಇವರನ್ನು ಎಷ್ಟು ಮನ್ನಿಸಿ ದರೂ ಸಾಲದು. ಕೇವಲ ಅಚ್ಚಿನ ಕೆಲಸದಲ್ಲಿಯೆ ಅಲ್ಲದೆ ಬೇರೆ ಎಲ್ಲ ತರದಿಂದಲೂ ಉಪಯುಕ್ತ ಸಲಹೆಗಳನ್ನು ಕೊಟ್ಟಿದ್ದಕ್ಕಾಗಿ ಅವರಿಗೆ ನಾನು ಮತ್ತಿಷ್ಟು ಋಣಿಯಾಗಿರುವೆನು. ಅಲ್ಲದೆ ಪುಸ್ತಕವನ್ನು ಮನ ಮೆಚ್ಚುವಂತೆ ಸಮಯಕ್ಕೆ ಸರಿಯಾಗಿ, ಅಂದವಾಗಿ, ಅಚ್ಚುಹಾಕಿಕೊಟ್ಟ

ಧಾರವಾಡದ 'ಜಯಕರ್ನಾಟಕ' ಮುದ್ರಣಾಲಯದ ಒಡೆಯರಾ **ಶ್ರೀ. ಕೆ. ಜಿ. ರಾಯದುರ್ಗ** ಇವರ ಕೃತಜ್ಞತೆಯನ್ನು ಅವಶ್ಯ ವಾಗಿ ಸ್ಮರಿಸುವೆನು.

ಕರ್ನಾಟಕ ಕಾಲೇಜ
ಧಾರವಾಡ
ತಾ|| ೧೫–೪–೩೨



**ರಂಗಾಚಾರ್ಯ ಜಾಗೀರದಾರ.**

* * * * *

ಈ ನಾಟಕವನ್ನು ಮೊದಲು ಆಡಿ ತೋರಿಸುವಾಗ ಪಾತ್ರ ಗಳನ್ನು ವಹಿಸಿದ್ದಕ್ಕಾಗಿ ಕೆಳಗೆ ಕಾಣಿಸಿದ ಸಂಘದ ಸದಸ್ಯರಿಗೆ ನಾನು ತುಂಬಾ ಋಣಿಯಾಗಿರುವೆ.

| ಹೆಸರು. | | | ಪಾತ್ರ. |
|---|---|---|---|
| ಶ್ರೀ. ಎಸ್. ಎಸ್. ಮಾಳವಾಡ | .... | .... | ನಾಟಕಕಾರ |
| ,, ಎಚ್. ಎಸ್. ಪಾಟೀಲ | .... | .... | ಪರಮಾತ್ಮ |
| ,, ದುಧೀಹಳ್ಳಿ | .... | .... | ವಿದ್ಯಾಧರ |
| ,, ಎಸ್. ಎ. ಜೋಶಿ | .... | .... | ಹರಿಹರರಾಯ |
| ,, ಸೂಳಿಭಾವಿ | .... | .... | ತಿಮ್ಮಾಜಿ |
| ,, ಕೆ. ಎ. ಕುಲಕರ್ಣಿ | .... | .... | ಮನೋರಮಾ |
| ,, ಎಲ್. ಎ. ಸವಣೂರ | .... | .... | ಮೋಹಿನಿ |
| ,, ಅಡಬಡ್ಡಿ | .... | .... | ಕಾಮಿ |
| ,, ಪಿ. ಕೆ. ನಾಯಕ | .... | .... | ೧ನೆಯ ಗೆಳೆಯ |
| ,, ಹಲಸಗಿ | .... | .... | ೨ನೆಯ ಗೆಳೆಯ |
| ,, ಮಂಗಳವೇಢೆ | .... | .... | ೩ನೆಯ ಗೆಳೆಯ |
| ,, ಹಲಗಲಿ | .... | .... | ೪ನೆಯ ಗೆಳೆಯ |
| ,, ಮುರನಾಳ | .... | .... | ಅಪ್ಪಾಜಿ |

R. V. J.

# “ ಎದೆವಯ್ಯ ”ನ
## ಮುನ್ನುಡಿ

ನಾನು ತಮ್ಮೆಲ್ಲರ ಪರಿಚಿತನಾದ ಎದೆವಯ್ಯ. ಮೊದಲೊಂದು ಮುನ್ನುಡಿಯನ್ನು ಬರೆದು ನನ್ನ ಗೆಳೆಯನು ಯೋಗ್ಯತೆಯ ನಾಟಕಕಾರನೆಂದು ತಮ್ಮೆಲ್ಲರಿಗೆ ತೋರಿಸಿ ಕೊಡಬೇಕೆಂದವನು ನಾನೇ. ಪಾಪದಿಂದ ಪುನರ್ಜನ್ಮವೆಂದು ಹೇಳಿ, ಕೇಳಿ, ನಂಬುವ ರೂಢಿಯು ನಮ್ಮಲ್ಲಿದ್ದರೂ ನನ್ನ ಅನುಭವವೇ ಬೇರೆಯಾಗಿದೆ. ಆ ಅನುಭವವೆಂದರೆ ನಾನು ಮತ್ತೊಮ್ಮೆ ಮುನ್ನುಡಿ ಬರೆಯಬೇಕಾದ ನನ್ನ ಪ್ರಸಂಗ. ಈ ಪ್ರಸಂಗವೆಲ್ಲಿ! ಪಾಪವೆಲ್ಲಿ! ಪುನರ್ಜನ್ಮವೆಲ್ಲಿ! ಎಂದು ನಾನು ಹುಚ್ಚನೊ ತಾವು ಹುಚ್ಚರೊ ಎಂಬಂತೆ ಯಾರಾದರೂ ಚಕಿತರಾಗಬಹುದು. ಆದುದರಿಂದ ಪ್ರಸಂಗಾನುಸಾರವಾಗಿ—ಆ ಮಾತಿನ ಪ್ರಸಂಗವೆತ್ತಿದ ತಪ್ಪಿಗಾಗಿಯೊ ಏನೊ—ಆ ಸಂಬಂಧವನ್ನೆ ಮೊದಲು ತೋರಿಸಿಕೊಡುವೆ.

ಪಾಪಕ್ಕೆ ಪುನರ್ಜನ್ಮವಿಲ್ಲ, ಇದ್ದರೂ ಈ ಲೋಕದಲ್ಲಿಲ್ಲ ಎಂದು ನನ್ನ ದೃಢವಾದ ಅಭಿಪ್ರಾಯ. ನಮ್ಮ ವ್ಯವಹಾರವೇ ಇದಕ್ಕೆ ಬಲವಾದ ಸಾಕ್ಷಿ. ಕೆಟ್ಟ ಕೆಲಸವನ್ನು ಮಾಡುವವನಿಗೆ ಇನ್ನೊಮ್ಮೆ ಅಂತಹ ಪ್ರಸಂಗವನ್ನು ಒದಗಿಸಿ ಕೊಡುವ ರೂಢಿ ಇದೆಯೆ ಎಲ್ಲಿಯಾದರೂ ? ತುಡುಗನಿಗೆ ತುಡುಗು ಮಾಡುವಂತೆ ಮಂದಿಯ ಮನೆಗೆ ಕಳುಹಿಸಿಕೊಡುವರೊ, ಇಲ್ಲವೆ ಇನ್ನೆಂದಿಗೂ ತುಡುಗು ಮಾಡದಂತೆ ಸಮಾಜದ ಮನೆಯಾದ ಸೆರೆಮನೆಗೆ ಕಳುಹಿಸಿಕೊಡುವರೊ ? ಇದಲ್ಲದೆ ಎಲ್ಲ ಅಪರಾಧಗಳಿಗೂ ಮತ್ತೊಮ್ಮೆ ಅವಸರ ಕೊಡದಂತಹ ಶಿಕ್ಷೆ ನೀಡುವದೇ ವಾಡಿಕೆಯಿದೆ. ಇದೊಂದು ಭದ್ರವಾದ ಮಾತು; ಅಲ್ಲಲ್ಲಿ

ಇದಕ್ಕೆ ಛಿದ್ರಗಳು ಕಂಡುಬಂದರೆ ಆಂಗ್ಲರ ಪರಿಪಾಠದಂತೆ ಅವು ನಿಯಮವನ್ನು ನೆಲೆಗೊಳಿಸುವ ಅಪವಾದಗಳೆಂದು ಹೇಳಬಹುದು. ಮನೆಯಲ್ಲಿ ಹವೆಯಾಡಿ ಮನೆಯು ಬಹುದಿನ ತಾಳಲು ಅವಸರ ಕೊಡುವ ಕಿಡಿಕಿಗಳಂತೆ. ಸಾದರಿಗಾಗಿ; ಹೊಟ್ಟೆಬಟ್ಟೆಗಿಲ್ಲದ ಮಕ್ಕಳನ್ನು ಬೆಳೆಯಿಸುವವನಿಗೆ ಇನ್ನು ಮುಂದೆ ಮಕ್ಕಳನ್ನು ಬೆಳೆಯಿಸದಂತಹ ಶಿಕ್ಷೆಯನ್ನು ಯಾರೂ ಕೊಡುವದಿಲ್ಲ; ಅದರಂತೆಯೆ ಹೆಂಡತಿಯನ್ನು ಹೆಗ್ಗಣವೆಂದು ಹೊಡೆಯುವ ಬಂಟನಾಯಕನಿಗೆ ಎರಡನೆಯ ಹೆಂಡತಿಯನ್ನು ಮಾಡಿಕೊಳ್ಳದಂತೆ ಯಾರೂ ಶಿಕ್ಷೆ ಕೊಡುವದಿಲ್ಲ. ಆದರೂ ವ್ಯವಹಾರದ ದೃಷ್ಟಿಯಿಂದ ಹೇಳುವದಾದರೆ ಕೆಟ್ಟಕೆಲಸಕ್ಕೆ–ಪಾಪಕ್ಕೆ – ಮತ್ತೊಂದು ಅವಸರವನ್ನು ಕೊಡುವ ರೂಢಿಯಿಲ್ಲವೆಂದು ಧಾರಾಳವಾಗಿ ಹೇಳಬಹುದು.

ಮನುಷ್ಯನ ಮಾತು ಹೀಗೆಂದ ಮೇಲೆ ಕರುಣಾಳುವಾದ ಪರಮಾತ್ಮನ ಮಾತನ್ನು ಬೇರೆಯಾಗಿ ಹೇಳಬೇಕೆ? ಒಂದು ವೇಳೆ ಪರಮಾತ್ಮನು ಪಾಪಿಗಳಿಗೆ ಪುನರ್ಜನ್ಮವನ್ನು ಕೊಡುವನೆಂದು ನಂಬಿದರೆ ಎಷ್ಟೊಂದು ಅನರ್ಥವಾಗಬಹುದು! ಈ ನಮ್ಮ ಭೂಲೋಕವೆಂದರೆ ಪರಮಾತ್ಮನ ಸೃಷ್ಟಿಯಲ್ಲಿಯ ದೊಡ್ಡದೊಂದು "ಯರವಡ" ಸೆರೆಮನೆಯೆಂದೇ ಹೇಳಬೇಕಾದೀತಲ್ಲವೆ? ಪಾಪಿಗಳು ಭರತಖಂಡದಲ್ಲಿಯೆ ಪುನರ್ಜನ್ಮವನ್ನು ತಾಳುವರೆಂಬುದು ಹಟಹಿಡಿಯುವಂತಹ ಮಾತೂ ಅಲ್ಲ; ಜಗತ್ತಿನಲ್ಲಿಯೆ ಸದ್ಯಕ್ಕೆ ಕಾಣಬರುವ ಎಲ್ಲ ಮಾನವ ಜೀವಿಗಳು ಹಿಂದಿನ ಜನ್ಮದ ತಮ್ಮ ತಮ್ಮ ಪಾಪಕ್ಕಾಗಿಯೆ ಹುಟ್ಟಿರುವರೆಂದು ಹೇಳಬೇಕು; ಹೀಗೆ ನಾವೆಲ್ಲರೂ ಪುನರ್ಜನ್ಮದ ಕೂಸುಗಳಿದ್ದುದರಿಂದ ಮತ್ತು ನಮ್ಮ ನಮ್ಮ ಪಾಪಕ್ಕಾಗಿಯೆ ಇಲ್ಲಿ ನಾವು ಉಳಿದುಕೊಂಡಿರುವದರಿಂದ ಮಹಾಶಯರುಗಳಾದ ನಾವುಗಳೆಲ್ಲ ಒಂದು ಕ್ರಿಮಿನಲ್ ಟ್ರಾಯಿಬ್ಸ ಸೆಟಲಮೆಂಟಿನ ಮೆಂಬರರೆಂದು

ಹೇಳಬೇಕು; ಇದಲ್ಲದೆ ಈ ಜಗತ್ತು ಅನಾದ್ಯನಂತವಾಗಿ ಸಾಗಿದುದ ರಿಂದ ಪಾಪವೂ ಅನಾದ್ಯನಂತವಾಗಿ ಸಾಗಿದೆಯಲ್ಲದೆ ನಮ್ಮ ಪಾಪ ಮಾಡುವ ಶಕ್ತಿಯು ಪರಮಾತ್ಮನನ್ನು ಕೂಡ ಮೀರಿದೆಯೆಂದು ಹೇಳಬೇಕು ! ಇದೆಂತಹ ಅನಾಹುತ ಪ್ರಸಂಗ ! ಇಲ್ಲವೆ, ಈ ಎಲ್ಲ ಅನಿಷ್ಟ ಕಲ್ಪನೆಗಳನ್ನು ಸನ್ನಿಪಾತದ ಕನಸುಗಳೆಂದು ಬಿಟ್ಟುಕೊಟ್ಟು ಪಾಪಕ್ಕೆ ಪುನರ್ಜನ್ಮವಿಲ್ಲೆಂದೇ ನಂಬಿಬಿಡಬೇಕೆ ?

ಏನೇ ಇರಲಿ, ಪುಣ್ಯವಂತರಿಗೆ ಪುನರ್ಜನ್ಮವೆಂಬುದನ್ನು ಮಾತ್ರ ಪರಮಾತ್ಮನ ಸಾಕ್ಷಿಯಾಗಿ, ಶಾಸ್ತ್ರೀಯ ಜ್ಞಾನದ ಪರವಾಗಿ, ವ್ಯವ ಹಾರದ ಅನುಭವದ ಆಣೆ ಮಾಡಿ ಹೇಳಬಲ್ಲೆ. ಪರಮಾತ್ಮನು ಪುಣ್ಯ ವಂತನೆಂದು ನನ್ನದಂತೂ ನಂಬಿಕೆ. ಆ ಪರಮಾತ್ಮನು सम्भवामि युगे युगे ಎಂದು ತಾನಾಗಿಯೆ ಸಾರಿಲ್ಲವೆ ? ತಾನು ಅಂತಹ ಪುಣ್ಯವಂತ ನೆಂದೇ ತನಗೆ ಮೇಲಿಂದ ಮೇಲೆ ಜನ್ಮ ತಾಳುವ–ಅವತರಿಸುವ– ಪ್ರಸಂಗ ಬರುವದೆಂದು ಕೂಡ ಗೀತೆಯಲ್ಲಿ ಹೇಳಿಲ್ಲವೆ ? ಇದಲ್ಲದೆ, ಹೆಚ್ಚು ಸಲ ಹುಟ್ಟುವವನು ಹೆಚ್ಚು ಪುಣ್ಯವಂತನೆಂದು ನಾನು ಕೇಳಿದ ಪುರಾಣಗಳ ಕತೆಗಳಿಂದಲೇ ಸಾಹಸಮಾಡಿ ಹೇಳುವೆ. ಪರ ಮಾತ್ಮನ ಭಕ್ತರು ಪುಣ್ಯವಂತರೆಂದೂ, ಅವನ ದ್ವೇಷಕರು ಪಾಪಿಗ ಳೆಂದೂ ಮೊದಲು ನೆನಪಿನಲ್ಲಿಡತಕ್ಕದ್ದು. ಹೀಗಿದ್ದರೂ " ನನ್ನ ಭಕ್ತರೆಂದು ಏಳು ಜನ್ಮಗಳನ್ನು ತಾಳುವಿರೊ, ನನ್ನ ದ್ವೇಷಕರೆಂದು ಮೂರು ಜನ್ಮಗಳನ್ನು ತಾಳುವಿರೊ " ಎಂದು ಪರಮಾತ್ಮನೇ ಜಯ–ವಿಜಯರಿಗೆ ಕೇಳಿದನೆಂಬ ಕತೆಯಿಲ್ಲವೆ ? ಇಂತಹ ಸಂಗತಿಗ ಳಿಂದ ನಿಷ್ಕರ್ಷೆಯಾದುದೇನು ? ಪರಮಾತ್ಮನು ಪುಣ್ಯವಂತನೆಂದು ಒಪ್ಪಿದವರು ಪುಣ್ಯದಿಂದಲೇ ಪುನರ್ಜನ್ಮವೆಂದೂ ಒಪ್ಪಬೇಕಾಗು ವದು.

ಇತ್ತೀಚಿನ ಶಾಸ್ತ್ರೀಯ ಜ್ಞಾನದಿಂದಾದರೂ ಇದೇ ಸಂಗ

ತಿಯು ತಿಳಿದು ಬರುವದು. "ಬಳಿಯುವದೇ ಉಳಿಯುವದು." (Survival of the fittest) ಎಂಬುದು ಸೃಷ್ಟಿಯ ನಿಯಮವೆಂದು ಶಾಸ್ತ್ರೀಯ ಜ್ಞಾನವು ಹೇಳುವದು. ಚರಾಚರ ಪ್ರಪಂಚದಲ್ಲಿಯ ಯಾವ ವರ್ಗವು (Species) ಸುತ್ತಲಿನ ಸೃಷ್ಟಿಯನ್ನು ತನ್ನಲ್ಲಿ ಸೇರಿಸಿಕೊಂಡು ತನ್ನನ್ನು ಸುತ್ತಲಿನ ಸೃಷ್ಟಿಗೆ ಸರಿಪಡಿಸಿಕೊಳ್ಳುವದೊ ಅಂತಹದಕ್ಕೆಯೇ ಬಾಳುವ ಯೋಗ್ಯತೆಯಂತೆ, ಉಳಿಯುವ ಶಕ್ತಿಯಂತೆ; ಯಾವನು ಸುತ್ತಲಿನ ಸಮಾಜವನ್ನು ತನ್ನಲ್ಲಿ ಕೂಡಿಸಿಕೊಂಡು ತನ್ನನ್ನು ಸುತ್ತಲಿನ ಸಮಾಜಕ್ಕಾಗಿ ಸರಿಪಡಿಸಿಕೊಳ್ಳುವನೊ ಅವನೇ ಪ್ರಾಣಿ ವರ್ಗದಲ್ಲಿ ಯೋಗ್ಯತೆಯಿಂದ ಏರುತ್ತೇರುತ್ತ ಬೇರೆ ಬೇರೆಯಾಗಿ ರೂಪ-ಜನ್ಮಗಳನ್ನು ತಾಳುತ್ತ ಬಾಳುವನು ಎಂದು ಸಮನ್ವಯಿಸಿಯೆ ಹೇಳಬಹುದಲ್ಲವೆ ? ಇಂತಹ ಮನುಷ್ಯನನ್ನು ಪುಣ್ಯವಂತನೆಂದು ವ್ಯವಹಾರದಲ್ಲಿ ತಿಳಿದುಕೊಳ್ಳುವದಿಲ್ಲವೆ ?

ವ್ಯವಹಾರವನ್ನೆ ಸೂಕ್ಷ್ಮ ರೀತಿಯಿಂದ ನೋಡುವವರಿಗೆ ಇಷ್ಟೊಂದು ಪ್ರಮಾಣಗಳ ಆಡಂಬರವೇ ಬೇಡ. ಹುಲ್ಲುಕಡ್ಡಿಗೆ ಉರಿ ಹಚ್ಚಲು ಹನುಮಂತನ ಬಾಲವೇಕೆ ? ವ್ಯವಹಾರದ ದೃಷ್ಟಿಯಿಂದ ಸಮಾಜಕ್ಕೆ ಬೇಕೆಂದೆನಿಸತಕ್ಕುದು ಪುಣ್ಯ, ಸಮಾಜಕ್ಕೆ ಬೇಡಾಗಿರತಕ್ಕುದು ಪಾಪ. ಬೇಕಾದುದು-ಅಂದರೆ ಪುಣ್ಯವು-ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ರೂಪಗಳಿಂದ ಜನ್ಮ ತಾಳುವದೆಂದೇ ಸಮಾಜವೂ ಅದರಲ್ಲಿಯ ವ್ಯವಹಾರವೂ ಅಬಾಧಿತವಾಗಿ, ಅನಾದ್ಯನಂತವಾಗಿ ಸಾಗಿಲ್ಲವೆ ?

ಹೀಗೆ ವ್ಯವಹಾರದ ದೃಷ್ಟಿಯಿಂದ ನೋಡಿದರೂ ಕೂಡ ಪಾಪಕ್ಕೆ ಪುನರ್ಜನ್ಮವಿಲ್ಲ, ಪುಣ್ಯಕ್ಕೆ ಪುನರ್ಜನ್ಮ ಬಿಟ್ಟಿಲ್ಲ. ಇದೇನು? ಪಾಪಕ್ಕೆ ಪುನರ್ಜನ್ಮವೆಂದು ಇದುವರೆಗೆ ನಂಬಿರುವೆವು, ಪುಣ್ಯದಿಂದ ಮುಕ್ತಿಯೆಂದು ತಿಳಿದುಕೊಂಡಿರುವೆವು, ಅದು ಕಾರಣ ಮುಕ್ತಿಗಾಗಿ

ಪುಣ್ಯಕೆಲಸಗಳನ್ನು ಮಾಡುವೆವು; ಅದನ್ನೆಲ್ಲ ಬಿಟ್ಟು ಪುಣ್ಯಕ್ಕೆ ಪುನರ್ಜನ್ಮವೆಂದು ಹೆದರಿಸುವದು ಸರಿಯೆ ? ಪುಣ್ಯಕ್ಕೆ ಪುನರ್ಜನ್ಮವಿದ್ದರೆ ಮುಕ್ತಿಯ ಹವಣಿಕೆಯಿಂದ ಎಲ್ಲರೂ ಪಾಪಗೆಲಸಗಳನ್ನು ಮಾಡಬಹುದು, ಅದರಿಂದ ವ್ಯವಹಾರದಲ್ಲಿ ಅವ್ಯವಸ್ಥೆಯೆ ಹರಡಬಹುದು. ಇದೇನು ನಿಮ್ಮ ತತ್ವಜ್ಞಾನ ! ಎಂದು ಹಿತಬುದ್ಧಿಯವರು ಕೂಡ ನನಗೆ ಕೇಳಬಹುದು. ಅದಕ್ಕೆ ನನ್ನದೊಂದೇ ಉತ್ತರ; ಪುಣ್ಯದಿಂದ ಮುಕ್ತಿ ಎಂದು ನಂಬಿದರೆ ಮುಕ್ತಿಯಕಿಂತ ಮುಂಚಿತವಾದುದು ಅಂದರೆ ಈ ಭೂಲೋಕವಾಸವು ಕೇಡು ಎಂದು ನಂಬಬೇಕು; ಆ ಮೇಲೆ ಇಲ್ಲಿ ಹುಟ್ಟುವದು ತಪ್ಪು, ಬೆಳೆಯುವದು ಅಪರಾಧ ಎಂದು ತಿಳಿಯಬೇಕು; ಹೀಗೆ ತಿಳಿದ ಮೇಲೆ ಅದರಂತೆಯೆ ನಡೆಯಬೇಕು, ಅಂದರೆ ಬುದ್ಧಿಯು ಹೊಳೆದ ಕ್ಷಣ ಬುದ್ಧಿಯ ಬುರುಡೆಯಾದ ತಲೆಯನ್ನೂ ಹೊಡೆದು ಬಿಡಬೇಕು. ಅಷ್ಟೊಂದು ಎದೆಗಾರಿಕೆಯಿಲ್ಲವಾದರೆ ಧರ್ಮದಿಂದ ಆತ್ಮಹತ್ಯೆ ನಿಂದ್ಯವೆಂದು ಹೇಳಬೇಕು ! ಇದನ್ನೆಲ್ಲ ಬಿಟ್ಟುಕೊಟ್ಟು ನಮ್ಮ ಅನುಭವದಿಂದ ನಾವು ಕಂಡ ತತ್ವವನ್ನು ಅನುಸರಿಸಿಯೆ ನಡೆಯುವದು ಒಳಿತು ಅಲ್ಲವೆ ? ಕಾಣಲಾರದ ಸಂಗತಿಗಳ ನಂಬಿಕೆಗಿಂತ ಕಂಡ ಸಂಗತಿಗಳ "ನಂಬಿಕೆ" ಯೆ ಹಿತಕರವಲ್ಲವೆ ?

ಪುಣ್ಯಕ್ಕೆ ಪುನರ್ಜನ್ಮವೆಂದು ಹೇಳಿದರೆ ಮುಕ್ತಿಯ ಆಶೆಯಿಂದ ಯಾರೂ ಪುಣ್ಯವನ್ನೆ ಮಾಡಲಿಕ್ಕಿಲ್ಲೆಂಬ ಹೆದರಿಕೆಯೂ ವ್ಯರ್ಥವಾದುದು. ನನ್ನ ಕಲ್ಪನೆಯಲ್ಲಿ ಮುಕ್ತಿಯೆಂಬುದೊಂದು ಮನಸಿನ ಯುಕ್ತಿ; ಮನುಷ್ಯನ ಮೋಹದ ಗುಡಿಗೆ ಇದೊಂದು ನಂಬಿಗೆಯ ಕಳಸ. ಮುಕ್ತಿಯು ಪರಮಶ್ರೇಯವೆಂದು ಹೇಳಿ, ತಾನು ಮಾಡುವದೆಲ್ಲ ಮುಕ್ತಿಗಾಗಿಯೆ ಎಂದು ಸಾಧಿಸಿದರಾಯಿತಲ್ಲವೆ ತನ್ನ ಪುಣ್ಯ ಸಂಪಾದನೆ ? ಕುರುಡನ ಹಿಂದೆ ಕುರುಡನೆಂಬಂತೆ ನಂಬಿಗೆಯ ಹಿಂದೆ

ನಂಬಿಗೆ. ಹೀಗೆ ನಂಬಿಗೆಯನ್ನೆ ದಿಂಬು ಮಾಡಿಕೊಂಡು ವ್ಯವಹಾರವು ಬಿದ್ದುಕೊಂಡಿದ್ದರೆ ಆ ಮಾತು ಬೇರೆ; ಆದರೆ ವ್ಯವಹಾರವು ನಂಬಿಗೆಯ ಕಂಬದ ಮೇಲೆ ನಿಂತಿಲ್ಲ, ವ್ಯವಸಾಯವು ನಿಂತಿದೆ ನಂಬಿಗೆಯ ಮೇಲೆ.

ವ್ಯವಹಾರಕ್ಕೆ ತಳಹದಿಯು ಬೇರೊಂದಿದೆ; ವಿಚಾರ ಮತ್ತು ಆಚಾರ. ವ್ಯವಹಾರವು ಹುಟ್ಟುವದು ವಿಚಾರದಲ್ಲಿ; ಬೆಳೆಯುವದು ಆಚಾರದಲ್ಲಿ. ಹೀಗಿದ್ದರೂ ವಿಚಾರ–ಆಚಾರಗಳು ಬೇರೆಯಲ್ಲ. ಅವೆರಡೂ ಒಾದೇ ಮನಃಪ್ರವೃತ್ತಿಯ ಎರಡು ರೂಪಗಳು. ಕಾಣದಂತಿದ್ದರೆ ವಿಚಾರ, ಕಂಡುಬಂದರೆ ಆಚಾರ ಎಂದು ಸಾಮಾನ್ಯವಾಗಿ ಹೇಳಬಹುದು. ವಿಚಾರ-ಆಚಾರಗಳು ಹೊಂದಿಕೆಯಲ್ಲಿದ್ದರೆ ಮನುಷ್ಯನು ಬೆಳೆದು ಉಳಿಯುವನು. ಹಸಿವೆಯ ವಿಚಾರಕ್ಕೆ ಊಟವೇ ಆಚಾರ. ಹಸಿದವನು ಉಣ್ಣದ ಪಕ್ಷಕ್ಕೆ ಏನಾಗುವದೊ ಅದೇ ಎಲ್ಲೆಲ್ಲಿ ವಿಚಾರ–ಆಚಾರಗಳು ಹೊಂದುವದಿಲ್ಲ ಅಲ್ಲಲ್ಲಿ ಕಂಡುಬರಬಹುದು. ವಿಚಾರ-ಆಚಾರಗಳು ತಂದೆ ಮಕ್ಕಳಂತೆ, ಒಂದೇ ರಕ್ತವಿದ್ದವುಗಳು; ನಂಬಿಗೆಯು ಮಾತ್ರ ರೂಢಿಯಲ್ಲಿಯ ಮಲತಾಯಿಯಂತೆ; ಮನೆಹೊಕ್ಕಳೆಂದರೆ ಸಾಕು, ತಂದೆ–ಮಕ್ಕಳನ್ನು ದೂರ ಮಾಡುವ ಹಂಚಿಕೆಯೆ ಅವಳಿಗೆ. ಹೀಗಿರಲು ವ್ಯವಹಾರದಲ್ಲಿ ನಂಬಿಗೆಯೆ ಬಲವಾದರೆ, ವ್ಯವಹಾರದಲ್ಲಿ ಆಚಾರ-ವಿಚಾರಗಳು ಒಂದರಿಂದೊಂದು ದೂರಾದರೆ ಏನಾಗಬಹುದೆಂದು ಬೇರೆ ಹೇಳುವ ಕಾರಣ ವಿಲ್ಲ.

ನಂಬಿಗೆಯಿಂದ ಆಚಾರ–ವಿಚಾರಗಳು ಹೇಗೆ ದೂರವಾಗುವವೆಂಬುದನ್ನು ಸುಲಭವಾಗಿಯೆ ಕಾಣಿಸಿಕೊಡಬಹುದು. ಸದ್ಯಕ್ಕೆ ವ್ಯವಹಾರದಲ್ಲಿ ಆಚಾರವೆಂಬುದು ರೂಢಿಯೆಂಬ ಮುದುಕನ ಕಯ್ಯ

ಲ್ಲಿಯ ಒಂದು ಬಡಿಗೆಯಾಗಿದೆ. ಮನೆಯಲ್ಲಿ ಅದರ ಉಪಯೋಗವಿಲ್ಲ, ಹೊರಗೆ ಮಾತ್ರ ಅದನ್ನು ಬಿಟ್ಟು ಹೋಗುವಂತಿಲ್ಲ. ವಿಚಾರವು ಮಾತ್ರ ವಿಗ್ರಹದ ದೇವನಂತೆ, ಮನೆಯಲ್ಲಿ ಮುಚ್ಚಿಟ್ಟು ಪೂಜಿಸು ವಂತಹದು, ಹೊರಗೆ ತೋರಿಸಿದರೆ ವ್ಯೈಲಿಗೆಯಾಗುವಂತಹದು. ಹೊರಗಿನ ಕಲ್ಲು–ಮುಳ್ಳುಗಳನ್ನು ದಾಟಿಸಿ ನಡೆಯಲು ಸಾಮರ್ಥ್ಯ ಕೊಡುವ ಬಡಿಗೆಗಿಂತ ಮನೆಯಲ್ಲಿ ತನ್ನ ಮನಸಿಗೆ ಸಮಾಧಾನ ಕೊಡುವ ಪೆಟ್ಟಿಗೆಯ ದೇವನೇ ದೊಡ್ಡವನು. ಹೀಗಾಗಿ ಆದುದೇನು ? ಅನ್ಯರ ಕೇಡು ಮಾಡಬಾರದೆಂದು ಗುಣಗುಟ್ಟುತ್ತ ತನ್ನ ಗೂಡಿ ನಲ್ಲಿಯೆ ಸೇರಿರುವನು ದೊಡ್ಡವನೊ, ಅನ್ಯರಿಗೆ ಕೇಡು ಆಗದಂತೆ ತನ್ನ ಬೇಡು ಕಟ್ಟುವವನು ದೊಡ್ಡವನೊ ? ಹೇಳಲುಬರುವಂತಿಲ್ಲ. ಮೂಗು ಮುಚ್ಚಿಕೊಂಡು ಮನೆಯಲ್ಲಿ ಕುಳಿತುಕೊಳ್ಳುವವನು ಪುಣ್ಯವಂತನೊ, ಮೂಗು ಬಿಚ್ಚಿ ಮೂಲೆ ಮೂಲೆ ಗುಂಪಾದ ಕಸವನ್ನು ತೆಗೆದೊಗೆಯು ವವನು ಪುಣ್ಯವಂತನೊ ? ಹೇಳಲು ಧೈರ್ಯವಿಲ್ಲ. ಯಾಕೆ ? ವಿಚಾರ ಆಚಾರಗಳು ದೂರವಾಗಿವೆಯೆಂದು. ಆಚಾರವು **ಈಗಿನ ಕಾಲ ದಲ್ಲಿ** ನಡೆಯುವದು, ವಿಚಾರವು **ಹಿಂದಿನಿಂದ** ನಡೆದು ಬಂದದ್ದು. ಇವುಗಳನ್ನು ಕೂಡಿಸುವದು ಹೇಗೆ ? ಸಮಾಜದಲ್ಲಿ ಬೆಳಕು ಕೊಡು ವದು ಆಚಾರ, ಸಮಾಜದಲ್ಲಿ ಹುಳಗೆಟ್ಟುದು ವಿಚಾರ. ಇವುಗಳನ್ನು ಕೂಡಿಸಲು ನಂಬಿಗೆಯಂತಹ ಮತ್ತೊಂದು ಉಪಯುಕ್ತತರ ಉಪಾಯವಿಲ್ಲ. ಮೂಗು ಹಿಡಿಯುವವನು ಎಂದಾದರೂ ಸಾಧುವೇ ಎಂದು ನಂಬಿಕೆಯನ್ನು ಹರಡಿಸಿಬಿಡುವದು; ಕಸ ಬಳಿಯುವವನು ಎಂದಾದರೂ ಹೊಲೆಯನೆ ಎಂದೂ ನಂಬಿಕೆಯನ್ನು ಸ್ಥಿರಪಡಿಸುವದು. ಆದರಂತೆಯೆ ನಂಬಿಕೆಯು ಎಂದಿಗೂ ಅಳಿಯಬಾರದಂತೆ ಸ್ವತಃದ ವಿಚಾರಶಕ್ತಿಯನ್ನು ಹೂಳಿಟ್ಟು ಹುಳಗಳನ್ನು ಮೆಯ್ಯಿಸುವದು. ಸೂರ್ಯನು ಮುಳುಗುವ ದಿಕ್ಕು ಪಶ್ಚಿಮ ಎಂದು ಪಾಠಮಾಡಿಸು

ವದು, ಸ್ವರ್ಗದಲ್ಲಿ ಸೂರ್ಯನು ಎಂದಿಗೂ ಮುಳುಗುವದಿಲ್ಲವೆಂದು ಶ್ರುತಿಯ ಆಧಾರವನ್ನು ತೋರಿಸುವದು, ಆಮೇಲೆ ಸ್ವರ್ಗದ ಪಶ್ಚಿಮದ ಬಾಗಿಲಿನಲ್ಲಿ ಮುಂತಾಗಿ ಪುರಾಣ ಕತೆಗಳನ್ನು ಹೇಳುವದು. ಸ್ವರ್ಗದಲ್ಲಿ ಸೂರ್ಯನು ಮುಳುಗದೇ ಇದ್ದರೆ ಪೂರ್ವ ಪಶ್ಚಿಮ ತಿಳಿಯುವದು ಹೇಗೆ ಎಂದು ಯಾವನಿಗಾದರೂ ಕೇಳುವ ಬುದ್ಧಿ ಇಲ್ಲವೆ ಧೈರ್ಯವಿದೆಯೆ ? ಕೇಳಿದರೆ ಅದೊಂದು ಪಾಪ, ಮತ್ತು ಎಂದಿಗೂ ಕೇಳದಂತೆ ನಮ್ಮ ಮನಃಸ್ವಾಸ್ಥ್ಯವನ್ನು ಕಾದಿಡಲು ನಂಜಗೆಯೆಂಬ ವೈದ್ಯನದೊಂದು ನೀರು.

ವೈದ್ಯನಂಜ ಕೂಡಲೆ ಸ್ಮರಣೆಗೆ ಬಂದಿತು. ನಾನು ನಾಟಕಕ್ಕೆ ಮುನ್ನುಡಿಯನ್ನು ಬರೆಯುಹತ್ತಿರುವೆ, ಪಂಡಿತರ ಸಭೆಯಲ್ಲಿ ವಾಗ್ವಾದವನ್ನು ನಡೆಸಿಲ್ಲ. ವ್ಯವಹಾರವು ನಂಜಗೆಯ ಮೇಲೆಯೇ ನಿಂತಿದೆ ಎಂದು ನನ್ನ ಮತ. ವ್ಯವಹಾರದ ಕನ್ನಡಿಯೇ ನಾಟಕವೆಂದು ನನ್ನ ಮತ. ಅದಕ್ಕಾಗಿಯೆ ಇಂತಹ ರೂಢಿಯ ಸತ್ಯಗಳನ್ನು ತೋರಿಸುವ ನಾಟಕಗಳೇ ನಿಜವಾದ ನಾಟಕಗಳು, ಮಿಕ್ಕವುಗಳೆಲ್ಲ ಹುಡುಗಾಟಿಕೆಯ ಕೀಟಕಗಳು ಎಂದು ಮೊದಲಿನ ಮುನ್ನುಡಿಯಲ್ಲಿಯೆ ಹೇಳಿಬಿಟ್ಟಿರುವೆ. ಕೀಟಕವೆಂದು ಹೇಳುವದರಲ್ಲಿ ತಿರಸ್ಕಾರವಿಲ್ಲ, ಅವುಗಳ ಸ್ವಭಾವವರ್ಣನೆಯಿದೆ. ಬೇಜಾರವಾಗುವಂತೆ ಅಂಟಿ ಹರಡುವದು ಕೀಟಕದ ಸ್ವಭಾವ; ಇಷ್ಟೊಂದು ಕಾಡುವವೆಂದು ಅವುಗಳ ಮೇಲೆ ಕೋಪಿಸುವದು ಕಷ್ಟ, ಅವುಗಳನ್ನು ಹೊಡೆಯಲು ಕೈಯೆತ್ತುವದರಲ್ಲಿ ಸಾಹಸವಿಲ್ಲ. ಕೀಟಕಗಳ ಇನ್ನೊಂದು ಸ್ವಭಾವವೂ ಇವುಗಳಲ್ಲಿದೆ; ಮನುಷ್ಯನಂತೆ ಅವು ಪ್ರತಿಭೆಯ ( Intuition ) ಪ್ರಾಣಿಗಳಲ್ಲ, ಪ್ರಕೃತಿ (Instinct) ಯಿಂದ ಪ್ರಾಣ ಹಿಡಿಯುವಂತಹವು. ಅವುಗಳ ಬಾಳುಯೆಂದರೆ ಒಂದೇ ಮಾದರಿ. ನಾನು ಹೇಳುವ ನಾಟಕಗಳಾದರೂ ಒಂದೇ ಮಾದರಿ. ಎಲ್ಲ ಸದ್ಗುಣಗಳ ತವರುಮನೆಯಾದವ

ನೊಬ್ಬ ನಾಯಕನು; ಎಲ್ಲ ದುರ್ಗುಣಗಳ ತೆಗ್ಗಿನಂತಿದ್ದವನೊಬ್ಬ ಪ್ರತಿನಾಯಕನು. ನಾಟಕವು ಮೋಹದ ಮರಿ, ನಾಟಕಕಾರನು ಮೋಸದ ಮೂರ್ತಿ. ಎಲ್ಲ ಗುಣಗಳ ನೆಲೆಯಾಗಿ, ಸಂಪತ್ತಿನ ನಿಧಿಯಾಗಿ, ನಿಷ್ಕಪಟ ಪ್ರೇಮದಿಂದ ಸೌಂದರ್ಯದ ಸರೋವರದಂತಿದ್ದ ಬಾಲೆಯನ್ನು ಪ್ರೀತಿಸುವಂತಹರೇ ವ್ಯವಹಾರದಲ್ಲಿಲ್ಲ; ಜೀವನೋಪಾಯದ ಈ ವ್ಯವಹಾರದಲ್ಲಿ ಉಪಜೀವನಕ್ಕೆಂದು ಇದಕ್ಕಿಂತ ಹೆಚ್ಚು ಮಹತ್ವದ ಎಷ್ಟೋ ಸಂಗತಿಗಳಿವೆ ಮನುಷ್ಯನಿಗೆ. ಅದರಂತೆಯೆ ಜಾರನೆಂದರೆ ವ್ಯವಹಾರದಲ್ಲಿ ಜಾಲಿಯಮರದಂತೆಯೆ ಅಲ್ಲ; ಮುಟ್ಟಿದಲ್ಲೆಲ್ಲ ಮುಳ್ಳುಗಳೇ ಎಂದು ಹೇಳುವಂತಿಲ್ಲ. ವ್ಯವಹಾರವು ವಿದ್ಯುಚ್ಛಕ್ತಿಯಂತೆ ಒಂದು ಕೇವಲ ಪ್ರವಾಹಿ ( positive ) ಮತ್ತೊಂದು ಕೇವಲ ಅಪವಾಹಿ ( negative ) ಹೀಗೆ ಎರಡೇ ಎರಡು ಕಾಲುವೆಗಳಗುಂಟ ನಡೆದಿಲ್ಲ. ತಾನು ಪ್ರೀತಿಸುತ್ತಿದ್ದ **ಮನೋರಮೆಯು** ಎರಡನೆಯವನ ಹೆಂಡತಿಯಾದಂದಿನಿಂದ ಆವಳ ಮೇಲಿನ ತನ್ನ ಅಂತಹ ಪ್ರೇಮವನ್ನು ಕಿತ್ತೊಗೆದ ಈ ನಾಟಕದಲ್ಲಿಯ **ವಿದ್ಯಾಧರನು** ಕುನಸಿನ ಕೈಗೊಂಬೆಯಾಗಿ ಕುಟಿಲತನದ ಆಟವನ್ನು ಹೂಡಿದನು. ಸಮಾಜಕ್ಕೆ ಬೇಕಾದ ಮುಂದಾಳುವಾದ ಉದಾರಮತವಾದಿ **ಹರಿಹರರಾಯನು** ಮನೆಯಲ್ಲಿ ಹೆಂಡತಿಗೆ ಶಿಕ್ಷಣವಿಲ್ಲೆಂಬುದನ್ನೂ, ಮಗಳಿಗೆ ಶಿಕ್ಷಣವನ್ನು ಕೊಡಬೇಕೆಂಬುದನ್ನೂ ಮರೆತು ಹೊರಗಿನ ತನ್ನ ದೊಡ್ಡಿಸ್ತನದ ಮರಹೊದರಿನಲ್ಲಿ ಮನಸಿನ ಹೇಡಿತನವನ್ನೂ ಹೇಸಿತನವನ್ನೂ ಒಚ್ಚಿಟ್ಟನು. ಪರಸತಿಯಳ ಮೇಲೆ ಬಲಾತ್ಕಾರ ಮಾಡಿದನೆಂದು **ವಿದ್ಯಾಧರನು** ನೀಚನಾದ ಪ್ರತಿನಾಯಕನೆ, ಇಲ್ಲವೆ ಸಮಾಜಕ್ಕೆ ಮೋಸಮಾಡಬೇಕೆನ್ನುವ **ಹರಿಹರರಾಯನು** ನೀಚನಾದ ಪ್ರತಿನಾಯಕನೆ ? " ಮರೆಯುವದೆಂದರೆ ಮರೆಯುವದು, ಎಲ್ಲವನ್ನೂ ಮರೆಯುವದು " ಎಂದು ಸಮಾಧಾನವನ್ನು ತೋರಿಸುವ

[ಒಂಬತ್ತು

ಮುನ್ನುಡಿ

**ಶಿವಾಜಿ**ಯಂತೆ ಕಣ್ಣುಮುಚ್ಚಿಕೊಂಡು **ಹರಿಹರರಾಯ**ನಂತ ಹರು ಏನು ಮಾಡಿದರೂ ದೊಡ್ಡವರೇ ಎಂದು ತಿಳಿಯಬೇಕೆ ? ಇಲ್ಲವೆ ವಾಡಿಕೆಯ ಜಾಡಬಲೆಯಲ್ಲಿ ಸಿಕ್ಕು ಸುಖಪಡುವ **ಕಾಮಿ**ಯಂತೆ ತನ್ನ ಸ್ಫೂರ್ತಿಯೆ ವ್ಯವಹಾರದ ಮೂರ್ತಿಯೆಂದು ತಿಳಿಯಬೇಕೆ ? ಈ ಮೊದಲಾದ ಕಣ್ಣಿಗೆ ಕಾಣುವ, ಕಿವಿಯಿಂದ ಕೇಳುವ ಸ್ವಭಾವ ಚಿತ್ರವನ್ನು ತೋರಿಸಿದನೆಂದೇ ನನ್ನ ಗೆಳೆಯನ ಈ ನಾಟಕಕ್ಕೆ ಮುನ್ನುಡಿ ಬರೆಯಲು ಮುಂದೆ ಬಂದೆ. ನಾಟಕವೇನೊ ಜನರಿಗೆ ಬಲವಾಗಿ ರುಚಿಸಿತೆಂದು ಅವನಿಗೆ ಅಭಿಮಾನ. ಪಾಪ ! जनपदहित- कर्ता त्यज्यते पार्थिवेन्द्रैः । नरपतिहितकर्ता वाच्यतां याति लोके । ಎಂಬು ದನ್ನು ಮರೆತಿರುವನೇನೊ ?

ಆಗಿಹೋದುದಕ್ಕೆ ಕ್ಷಮೆಯಿರಲಿ. ಬರೆಯುವದೆಂದು ಬರುವೆ, ಮತ್ತೊಂದು ಬರೆದು ಹೋಗುವೆ. ಅದೊಂದು ನನ್ನ ಪ್ರಕೃತಿಯ ಪೇಚಾಟ; ತಿಳುವಳಿಕೆಯ ತಿಕ್ಕಾಟ. ನನ್ನ ಸ್ವಭಾವ ಗೊತ್ತಿದ್ದರೂ ಕೂಡ ನನಗೆ ಮುನ್ನುಡಿ ಬರೆಯಲು ಮುಂದುಮಾಡಿದ ಸತ್ಕಾರ ಕ್ಕಾಗಿ ಗೆಳೆಯನಿಗೆ ಉಪಕಾರಬದ್ಧನಾದ, ತಮ್ಮೆಲ್ಲರ ಪ್ರೋತ್ಸಾಹನ ದೊರೆತಲ್ಲಿ ಯಾವಾಗಲೂ ಇಂತಹ ಕೆಲಸಕ್ಕೆ ಸಿದ್ಧನಾದ,

ತಮ್ಮೆಲ್ಲರ ನಂಬಿಗೆಯಾಳು
" ಎದೆವಯ್ಯ "

# ಪಾತ್ರಗಳು

ಹರಿಹರರಾಯ ....ಒಬ್ಬ ಹೆಸರಾದ ಮತ್ತು ಜನರಿಗೆಲ್ಲ ಬೇಕಾದ ಮುಂದಾಳು ವಕೀಲ.

ತಿಮ್ಮಾಜಿ .... ....ಹರಿಹರರಾಯನ ಮುದುಕ ಕಾರಕೂನನು.

ವಿದ್ಯಾಧರ .... ....ಒಬ್ಬ ತರುಣ ಡಾಕ್ತರನು.

ಕಾಮಿ .... ....ತಿಮ್ಮಾಜಿಯ ಮಗನು.

೧ನೆಯವನು
೨ನೆಯವನು
೩ನೆಯವನು
೪ನೆಯವನು
} ಕಾಮಿಯ ಗೆಳೆಯರು.

ಅಪ್ಪಾಜಿ .... ....ಮದಿವೆಯಾಗದ ಮಗಳ ತಂದೆಯೊಬ್ಬ.

ಮನೋರಮಾ ....ಹರಿಹರಾಯನ ಎರಡನೆಯ ಹೆಂಡತಿ.

ಮೋಹಿನಿ .... ....ಹರಿಯರರಾಯನ ಮಗಳು.

ತಿಮ್ಮಾಜಿಯ ಹೆಂಡತಿ....ರಂಗಭೂಮಿಯಲ್ಲಿ ಕಾಲಿಡಲಾರದ ಹತಭಾಗಿನಿ.

ಇದಲ್ಲದೆ

ನಾಟಕಕಾರ ....( ನಾಟಕದೊಳಗಿನವ, ಹೊರಗಿನವನಲ್ಲ ).

ಪರಮಾತ್ಮ.

**ವಿ. ಸೂ.**

ಈ ನಾಟಕದಲ್ಲಿಯ ಪಾತ್ರಗಳ ಸ್ವಭಾವವು ಒಂದು ವೇಳೆ ಸಮಾಜದಲ್ಲಿ ಕಂಡುಬಂದರೂ ಅವರ ಹೆಸರುಗಳು ಮಾತ್ರ ಬರಹಗಾರನ ಕಲ್ಪನಾ– ತೊಟ್ಟಿಲಿನಲ್ಲಿ ಇಟ್ಟವುಗಳು.

# ವೈದ್ಯರಾಜ

## ನನ್ನದೀ

ಇಲ್ಲವೆ

## ನಾಂದೀ

(ಯಾವದೋ ಒಂದು ಊರೊಳಗಿನ ಯಾವದೋ ಒಂದು ಬೀದಿ. ಹೇಳಿಕೊಳ್ಳುವಂತಹ ಊರು ಆದರಲ್ಲವೆ ಇಂತಹದೆಂದು ಹೇಳುವದು? ಮೂರೂ ಸಂಜೆಯ ವೇಳೆ. ದೂರಿನಿಂದ ಕನಸಿನಲ್ಲಿಯಂತೆ ಗದ್ದಲ ಕೇಳಬರುವದು. ಈ ಬೀದಿಯಲ್ಲಿ ಮಾತ್ರ ನಿಃಶಬ್ದತೆ; ಆದರೇನು, ಇದು ನೋಡಿ, ಹುಚ್ಚನಂತೆ ಜಡೆ ಇಳಿದು ಬಿಟ್ಟು ಕೈ ಮಾಡಿ ಒದರುತ್ತ ಹಾಡುತ್ತ ಯಾವನೋ ಬರಹತ್ತಿರುವ. ಶಾಂತತೆಯು ಭಂಗವಾಯಿತೆಂದು ನಮ-ನಿಮಗೆ ಮೊದಲು ಕೊಂಚ ಕೋಪ ಬಂದರೂ—ಈ ವಿಚಿತ್ರ ವ್ಯಕ್ತಿಯನ್ನು ನೋಡಿ ಕುರುಡರು ಕೂಡ ಆಶ್ಚರ್ಯದಿಂದ ಕಣ್ಣು ತೆರೆಯಬಹುದು. ಅವನು ಹಾಡುವ ಅರ್ಥಗಟೆಯನ್ನು ಕೇಳಿ ಕಿವುಡರು ಕೂಡ ಕಿವಿಮುಚ್ಚಬಹುದು. ಅವನ—ಆದೋ ಸಾಕು. ಬಂದೇ ಬಿಟ್ಟನಲ್ಲ ! ಅವನು ಏನು ಮಾಡುವನೋ ಕೊಂಚ ಮರೆಯಾಗಿ ನೋಡುವಾ.)

ವ್ಯಕ್ತಿ:— (ಆವೇಶದಿಂದ, ಮಧ್ಯಮ ಸ್ವರದಲ್ಲಿ-ಅಂದರೆ ಹಾಡೂ ಅಲ್ಲ ಕವಿತೆಯೂ ಇರಲಿಕ್ಕಿಲ್ಲ. ಇಂತಹ ಸ್ವರದಲ್ಲಿ—ಎರಡೂ ಕೈಗಳನ್ನೆತ್ತಿ-ವ್ಯಾಯಾಮ ಮಾಡುವವನಂತೆ—ತಾಳ ಹಿಡಿಯುವನೇನೊ ಎನ್ನುವಂತೆ)

ಜಯ ಕರ್ನಾಟಕ ಜಯ ಕರ್ನಾಟಕ
ಜಯ ಜಯ ಕರ್ನಾಟಕ ಜಯ ಜಯ
ಕರ್ನಾಟಕ ಜಯ, ಭುವನೇಶ್ವರಿ ಜಯ
ಭುವನೇಶ್ವರಿ ಜಯ ಜಯ ಜಯ ಜಯ ॥

(ಹುಶ್ ಎಂದು ಬೆವರು ಒರಿಸಿಕೊಂಡು) ನಾನು ಬಂದೆನೆಂದರೆ ಸಾಕು, ಯಾರು ಎಂದು ಹೇಳುವ ಕಾರಣವೇ ಇಲ್ಲ. ಎಲ್ಲರೂ ನಾನು ಎಂದು ಹೇಳುವರು, ನನ್ನ ಗುರುತು ಹಿಡಿಯುವರು. ಬೊಟ್ಟು ಮಾಡಿ ತೋರಿಸುವರು. (ಹೆಮ್ಮೆಯ ನಗೆಯಿಂದ) ಕೃಷ್ಣನ ಬಾಯಿಯಲ್ಲಿ ಹದಿನಾಲ್ಕು ಲೋಕಗಳಿದ್ದವಂತೆ, ಆದರೆ ನಾನು ಹದಿನಾಲ್ಕು ಲೋಕಗಳ ಬಾಯಿಯಲ್ಲಿ ಇರುವೆ. (ಎಂದು ಮುಂದೆ ನಡೆದು, ಎದುರು ನೋಡಿ) ಎಲ, ಇದೇನು ? ಯಾರು ? (ಎಂದು ಆಶ್ಚರ್ಯಸ್ತಂಭಿತನಾಗಿ ನಿಲ್ಲುವನು. ಇಷ್ಟರಲ್ಲಿ ತಲೆಯಿಂದ ಕಾಲುಗಳ ವರೆಗೆ ಮುಸುಕು ಹಾಕಿಕೊಂಡು ಎರಡೂ ಕೈಗಳನ್ನು ಹೊರಗೆ ನಿಧಾನವಾಗಿ ಜನರನ್ನೆಲ್ಲ ಹೆದರಿಸುವವನಂತೆ ಎತ್ತಿ ಹಿಡಿದು ಯಾರೋ ಹೆಜ್ಜೆಗಳನ್ನು ಎಣಿಸುತ್ತ ಬರುವರು.)

ವ್ಯಕ್ತಿ.— (ಗದ್ದರಿಸಿ) ಯಾರು ನೀನು ?

**ಮುಸುಕು:—** (ದರ್ಪದಿಂದ) ನಾನು ಯಾರು ! ನಾನು ಯಾರೆನ್ನುವದು ಗೊತ್ತಿಲ್ಲದಂತಹ ಪಾಪಿ ನೀನು ಯಾರು ?

ವ್ಯಕ್ತಿ:— (ಸೊಕ್ಕಿನಿಂದ) ನಾನು—ಯಾರು ! ನಾನು ಯಾರೆನ್ನುವದು ಗೊತ್ತಿಲ್ಲದವರು **ಈ ಲೋಕದಲ್ಲಿ**ಯಂತೂ ಯಾವ ಜಾಣರೂ ಇಲ್ಲ.

**ಮುಸುಕು:—** (ಗಟ್ಟಿಯಾಗಿ ನಕ್ಕು) ಈ ಲೋಕದಲ್ಲಿ ! ಅಹಾ, ನನ್ನನ್ನು ಬಲ್ಲವರು ಈ ಲೋಕದಲ್ಲಿಯೇ ಅಲ್ಲ, ಪರಲೋಕದಲ್ಲಿಯೂ ಇರುವರು.

ವ್ಯಕ್ತಿ:— (ಆರ್ಭಟೆಯಿಂದ) ಓಹೋಹೊ, ಹೀಗೋ ? ನನ್ನನ್ನು ತಿಳಿಯದವರು ಒಂದು ಕ್ಷಣದಲ್ಲಿ ಪರಲೋಕವನ್ನು ಕಾಣುವರು.

ಮುಸುಕು:— (ಆಶ್ಚರ್ಯದ ಧ್ವನಿಯಲ್ಲಿ) ಅಂತಹನು ಯಾರಪ್ಪಾ ನೀನು !

ವ್ಯಕ್ತಿ:— (ಗಂಭೀರವಾಗಿ) ಆದಿ ಪುರುಷ ನಾನು.

ಮುಸುಕು:— (ಸಿಟ್ಟಿನ್ನು ತಡೆಯದೆ) ಆದಿ ಪುರುಷ ? ದ್ರೋಹೀ, ಏನೆನ್ನುವಿ ಎಚ್ಚರವಿದೆಯೆ ನಿನಗೆ ? ಯಾರೆಂದು ತಿಳಿದಿರುವಿ ನನ್ನನ್ನು ? (ಗದ್ದರಿಸುತ್ತ) ಪರಮಾತ್ಮ ನಾನು.

ವ್ಯಕ್ತಿ:— (ಆಶ್ಚರ್ಯದಿಂದ) ಪರಮಾತ್ಮ ! (ಗಟ್ಟಿಯಾಗಿ ನಕ್ಕು) ಓಹೊ! ನೋಡಿರುವೆ ಇಂತಹ ಸಾವಿರಾರು ಪರಮಾತ್ಮರನ್ನು. ಪರಮಾತ್ಮನಂತೆ ! ನನ್ನ ನಾಟಕದಲ್ಲಿ ಕುಣಿಸಿರುವೆ ಇಂತಹ ಸಾವಿರಾರು ಸೋಗುಗಳನ್ನು.

ಪರಮಾತ:— (ಸಂಶಯದ ಸ್ವರದಲ್ಲಿ) ನಾಟಕ ! ನಾಟಕವೆಂದರೇನು ?

ನಾಟಕಕಾರ:—(ಮತ್ತೆ ನಗುತ್ತ) ನಾಟಕವೆಂದರೇನು ಗೊತ್ತಿಲ್ಲ ತನಗೆ, ತಾನು ಪರಮಾತ್ಮನಂತೆ ! ನಾಟಕವೆಂದರೆ ಸೃಷ್ಟಿ, ಅದನ್ನು ಬರೆಯುವವನೆಂದರೆ ಸೃಷ್ಟಿಕರ್ತ.

ಪರಮಾತ್ಮ:— (ಅಣಕಿನ ದನಿಯಲ್ಲಿ) ಓಹೋ, ಸರ್ವಜ್ಞನಾದ ಸೃಷ್ಟಿಕರ್ತನೇ, ನಾನು ಯಾರೆಂಬದನ್ನು ಹೇಳಬಲ್ಲಿಯೊ ?

ನಾಟಕಕಾರ:—(ಆಶ್ಚರ್ಯ ತೋರಿಸಿ) ನೀನು ಯಾರು ? ಇದೇನು ದೊಡ್ಡ ಪ್ರಶ್ನವೆ ? ಮುಸುಕು ಹಾಕಿದ ನೀನು ಯಾವನೋ ಒಬ್ಬ ವೇಷಗಾರ—

ಪರಮಾತ್ಮ:— (ಗದ್ದರಿಸಿ) ನೀಚಾ !

ನಾಟಕಕಾರ:—ಇಲ್ಲವೆ—ಪರಸ್ತ್ರೀಯರ ಅಭಿಸಾರ ಮಾಡುವ ಒಬ್ಬ ಕಾಮುಕ.

ಪರಮಾತ್ಮ:— (ಸಿಟ್ಟು ತಡೆಯದೆ) ಹೇಸಿ, ಹೇಸಿ, ನೀನು ಮಹಾ ಪಾಪಿ ಇರುವಿ. ಇಲ್ಲವಾದರೆ ಮುಸುಕು ತೆಗೆದು ತೋರಿಸು

ತ್ತಿದ್ದೆ ನಾನು ಯಾರೆಂಬದು. ಹೇಳುವೆ ಕೇಳು. ಅನಂತ ಕೋಟಿ ಬ್ರಹ್ಮಾಂಡಗಳ ನಾಯಕ ನಾನು.

ನಾಟಕಕಾರಃ— ಅಬ್ಬಬ್ಬ ! ನನ್ನ ನಾಟಕದ ನಾಯಕರು ಇದಕ್ಕೂ ಮಿಗಿಲು.

ಪರಮಾತ್ಮ:— ಪಾಪಿಗಳನ್ನು ಪಾದದಿಂದ ಮೆಟ್ಟಿ, ಸಜ್ಜನರನ್ನು ಸ್ವರ್ಗಕ್ಕೆ ಕರೆಯುವವ ನಾನು.

ನಾಟಕಕಾರ:— ( ಹೆಮ್ಮೆಯಿಂದ ) ಎಲ್ಲರನ್ನೂ ಸಜ್ಜನರನ್ನು ಮಾಡಿ ಸ್ವರ್ಗಕ್ಕೆ **ಕರೆದುಕೊಂಡು** ಹೋಗುವವ ನಾನು.

ಪರಮಾತ್ಮ:— ( ಅಧಿಕಾರದಿಂದ ) ಕಾಲಕಾಲಕ್ಕೆ ಭಕ್ತರಿಗಾಗಿ ಭೂಮಿಗೆ ಇಳಿದುಬರುವ ಪರಮಾತ್ಮ ನಾನು, ಪರಮಾತ್ಮ.

ನಾಟಕಕಾರ:— ( ಹೆಮ್ಮೆಯಿಂದ ) ಸರ್ವಕಾಲವೂ ಭಕ್ತರಿಗಾಗಿ ಭೂಮಿಯಲ್ಲಿಯೇ ಉಳಿದುಕೊಳ್ಳುವ ನಾಟಕಕಾರ ನಾನು, ನಾಟಕಕಾರ. ( ತಿರಸ್ಕಾರದಿಂದ ) ಮಾತಿನಲ್ಲಿ ನನ್ನನ್ನು ಸೋಲಿಸುವೆಯಾ ?

ಪರಮಾತ್ಮ:— ( ಸಮಾಧಾನದ ಸ್ವರದಲ್ಲಿ ) ಆಗಲಿ, ಆಗಲಿ; ನಿನ್ನ ಶಕ್ತಿಯ ಸಾಕ್ಷಿ ಯಾವದು ?

ನಾಟಕಕಾರ:— ( ಆಶ್ಚರ್ಯ ತೋರಿಸಿ ) ಇನ್ನೆಲ್ಲಿಯ ಸಾಕ್ಷಿ ? ಪರಮಾತ್ಮನೆಂದು ಹೇಳಿಕೊಳ್ಳುವ ನೀನೇ ಸಮಕ್ಷವಾಗಿ ಹರಟೆ ನಡೆಸಿರುವಿಯಲ್ಲ ನನ್ನಕೂಡ.

ಪರಮಾತ್ಮ:— ( ಆನಂದದಿಂದ ನಗುತ್ತ ತಲೆದೂಗುತ್ತ ) ಚಾಣಾಕ್ಷ , ಒಳ್ಳೇ ಚಾಣಾಕ್ಷ.

ನಾಟಕಕಾರ:— ( ಹಟದ ಹುಡುಗನಂತೆ ) ಹೇಳಲಿಲ್ಲವೆ ನನ್ನನ್ನು ಮಾತಿನಲ್ಲಿ ಸೋಲಿಸುವದು ಶಕ್ಯವಿಲ್ಲೆಂದು ?

ಪರಮಾತ್ಮ :— (ಸಮಾಧಾನದಿಂದ) ಆಗಲಿ, ಆಗಲಿ; ಕೃತಿಯ ಸಾಮರ್ಥ್ಯದ ಪರೀಕ್ಷೆಯಾಗಲಿ. (ಗಾಂಭೀರ್ಯಯುಕ್ತ ವಾಣಿಯಿಂದ) ಕೋಟಿ ಕೋಟಿ ಜೀವರಾಶಿಗಳನ್ನು ಹುಟ್ಟಿಸುವ ಪರಮಾತ್ಮನ ಶಕ್ತಿ ಇದೆಯೆ ನಿನ್ನಲ್ಲಿ ?

ನಾಟಕಕಾರ:— (ತಿರಸ್ಕಾರದಿಂದ) ಕೋಟಿ ಕೋಟಿ ಹುಳಗಳು ತಿಪ್ಪೆಯ ಕಸದಲ್ಲಿ ಬೆಳೆಯುವವು.

ಪರಮಾತ್ಮ :— (ಹೆದರಿಸುವ ಧ್ವನಿಯಲ್ಲಿ) ಎಚ್ಚರದಿಂದ ಮಾತನಾಡು. (ಗದ್ದರಿಸುತ್ತ) ಇದೆಯೆ ಜೀವರಾಶಿಗಳನ್ನು ಹುಟ್ಟಿಸುವ ಶಕ್ತಿ ?

ನಾಟಕಕಾರ:— (ಹಟದಿಂದಲೂ ಹೆಮ್ಮೆಯಿಂದಲೂ) ಇಲ್ಲ, ಇಲ್ಲ. ಅಂತಹ ನಿರ್ಬಲಶಕ್ತಿ ನನ್ನದಲ್ಲ. ಅಡವಿಯಂತೆ ಹಬ್ಬಿದ ಜೀವಗಳ, ಅಡವಿಯಲ್ಲಿ ಬೆಳೆಯುವ ಜೀವಗಳ, ರಾಶಿಯನ್ನು ಸರಿಯಾದವೇಳೆಗೆ, ಜೋಕೆಯಿಂದ ಮನೆಗೆ ತಂದು ತುಂಬುವ ಕರುಣಾಮಯ ಶಕ್ತಿ ನನ್ನದು. (ತಿರಸ್ಕಾರದಿಂದ) ಜೀವಗಳನ್ನು ಹುಟ್ಟಿಸುವನಂತೆ, ಹುಟ್ಟಿದ ಜೀವಗಳನ್ನು ಕೊಲ್ಲಿಸುವನಂತೆ! ಹೀಗೆ ಬರೆದದ್ದನ್ನು ಅಳಿಸುವ ಅವಿಚಾರಿ ನಾನಲ್ಲ. (ಹಟದಿಂದ) ಯಾಕೆ, ನಿನ್ನ ಹಟ ಯಾಕೆ? ನೀನು ಪರಮಾತ್ಮನಾದರೆ ಇರುವಿಯಂತೆ, ನನ್ನದೇನು ಸಿಟ್ಟಿಲ್ಲ. ಆದರೆ ನಿನ್ನಲ್ಲಿ ವಿಶ್ವಾಸ ಹುಟ್ಟುವುದು ಹೇಗೆ ? ನಾನು ಪರೀಕ್ಷಿಸುವೆ. ಆಗಲಿ. ಜಡ ಪದಾರ್ಥದಲ್ಲಿ ಚೈತನ್ಯ ತುಂಬುವ ಶಕ್ತಿ ಇದೆಯೆ ನಿನಗೆ ?

ಪರಮಾತ್ಮ :— (ಗಟ್ಟಿಯಾಗಿ ನಕ್ಕು) ಅಹಾ, ನಿನ್ನಲ್ಲಿ ಚೈತನ್ಯ ತುಂಬಿದವರು ಯಾರೆಂದು ತಿಳಿದಿರುವಿ ?

ನಾಟಕಕಾರ:—( ಸಿಟ್ಟಿನಿಂದ ) ನನ್ನಲ್ಲಿ ? ನಾನೇನು ಅಂತಹ ಜಡನಲ್ಲ. ಆಗಲಿ. ನನ್ನಂತೆ ಸತ್ತ ಮೇಲೆಯೂ ಕೂಡ ಸೂರ್ಯ ನಂತೆ ಜಗವನ್ನೆಲ್ಲ ಬೆಳಗುವ ಶಕ್ತಿ ಇದೆಯೆ ನಿನ್ನಲ್ಲಿ ?

ಪರಮಾತ್ಮ:— ( ಗಟ್ಟಿಯಾಗಿ ನಕ್ಕು ) ಕೇಳಿರಿ, ಕೇಳಿರಿ; ಜಡನಲ್ಲವಂತೆ ತಾನು! ಆದರೆ ಪರಮಾತ್ಮನು ಸಾಯುವವನಲ್ಲೆಂಬ ಸಣ್ಣ ಮಾತು ಸಹ ತನಗೆ ಗೊತ್ತಿಲ್ಲ. ಹಹಹಾ.

ನಾಟಕಕಾರ:— ( ಹಟದಿಂದ ) ಇದ್ದವರಿಗೆ ಸಾವು, ಇಲ್ಲವೇ ಇಲ್ಲದವರಿಗೆ- ( ಪರಮಾತ್ಮನು ಒಮ್ಮೆಲೆ ಆಂ ಎಂದು ಆಶ್ಚರ್ಯದ ಉದ್ಗಾರ ತೆಗೆಯುವನು. ) ( ನಗುತ್ತ ) ಹೇಳಲಿಲ್ಲವೆ ನಿನಗೆ, ಮಾತಿನಲ್ಲಿ ನನ್ನನ್ನು ಸೋಲಿಸುವದು ಶಕ್ಯವಿಲ್ಲೆಂದು? ಆಗಲಿ, ಅದು ನನ್ನ ಚಟ. ಮನಸ್ಸಿಗೆ ಹಚ್ಚಿಕೊಳ್ಳಬೇಡ. ಆಗಲಿ, ಇನ್ನೊಂದು ಪ್ರಶ್ನೆ. ಹುಟ್ಟಿದ ಜೀವಿಗಳಿಗೆಲ್ಲ, "ನಿಮ್ಮಲ್ಲಿ ಜೀವ ಇದೆ, ನಿಮ್ಮಲ್ಲಿ ಶಕ್ತಿ ಇದೆ" ಎಂದು ಮನವರಿಕೆಯಾಗುವಂತೆ ಸಿದ್ಧ ಮಾಡಿ ತೋರಿಸುವ ಶಕ್ತಿ ಇದೆಯೆ ನಿನ್ನಲ್ಲಿ ?

ಪರಮಾತ್ಮ:— ( ಆಶ್ಚರ್ಯದ ಸ್ವರದಲ್ಲಿ ) ಏನು, ಏನು, ನಿನ್ನ ಮಾತಿನ ಅರ್ಥವೇನು ?

ನಾಟಕಕಾರ:—( ನಗೆಯಿಂದ ) ಅರ್ಥವೇನು? ಪಾಪ! ನಿನಗೇನು ತಿಳಿಯುವದು ಅದರ ಅರ್ಥ! ಎಲ್ಲಿಯವನೋ, ಬೀಸುವ ಗಾಳಿಯಂತೆ ಇರುವಿ, ಆಯ್ತು. ಗಾಳಿಯು ಬೀಸುವಂತೆ ಜಗತ್ತನ್ನು ಹುಟ್ಟಿಸುವಿ. ಬೀಸುವ ಚಟ ಗಾಳಿಗೆ, ಬೀಸುವದು; ಹುಟ್ಟಿಸುವ ಚಟ ನಿನ್ನದು, ಹುಟ್ಟಿಸುವಿ. ಇಬ್ಬರಲ್ಲಿಯೂ ನಿಂ ನಿಮ್ಮ ಚಟವನ್ನು ತಡೆದುಕೊಳ್ಳುವ ಸಾಮರ್ಥ್ಯವೇ ಇಲ್ಲ. ಆಗಲಿ, ಇನ್ನೊಂದು ಪ್ರಶ್ನೆ,

ಕಡೆಯ ಪ್ರಶ್ನೆ. ಹುಟ್ಟಿದ ಜೀವಿಗಳಿಗೆ ಬೆಳೆಯುವ ಸ್ವಭಾವ ಕಾಣಿಸಿಕೊಡುವ ಶಕ್ತಿ ಇದೆಯೆ ನಿನ್ನಲ್ಲಿ?

ಪರಮಾತ್ಮ:— (ಉದ್ವೇಗದಿಂದ) ಅಯ್ಯೋ, ಇದೇನು, ಇದೇನು? ಇವನು ಏನು ಮಾತನಾಡುವ? ನನ್ನ ಜಗತ್ತಿನ ಸಲುವಾಗಿಯೆ ಮಾತನಾಡುವನೆ? ನನ್ನ ಸೃಷ್ಟಿಯ ಸುದ್ದಿಯನ್ನೆ ಹೇಳುವನೆ? ನಾನು ನೋಡಲಿಲ್ಲವೆಂದು ತಿಳಿಯಲಾರದಂತಹ ಸ್ಥಿತಿಗೆ ಬಂದು ಮುಟ್ಟಿತೆ?

ನಾಟಕಕಾರ:— (ಕನಿಕರ ತೋರಿಸುತ್ತ) ಅಯ್ಯೋ, ಅಯ್ಯೋ, ಇದೇನು? ಮಾಡಿದ್ದಕ್ಕೆ ಮರಗುವ ಪರಮಾತ್ಮನನ್ನು ನೋಡಹತ್ತಿರುವೆನೆ ನಾನು? (ಅವನ ಭುಜದ ಮೇಲೆ ಕೈಯಿಟ್ಟು) ಪಾಪ, ನೋಡಿದಿಯಲ್ಲೊ? ಏನಾದರೊಂದು ಹುಚ್ಚು ತಲೆಯೊಳಗೆ ಹಾಕಿಕೊಂಡರೆ ಸುಮ್ಮಸುಮ್ಮನೆ ಗೋಳಿಡಬೇಕಾಗುವದು. ನೀನು ಪರಮಾತ್ಮನೆಂದು ಯಾರೊ ನಿನ್ನ ತಲೆಯೊಳಗೆ ಹುಚ್ಚು ಹಾಕಿರುವರು, ಒಗೆದು ಬಿಡು ಅದನ್ನು.

ಪರಮಾತ್ಮ:— (ದೂರ ಸರಿದು ಸಿಟ್ಟಿನಿಂದ) ಏನು, ಏನು! ನಾನು ಪರಮಾತ್ಮನಲ್ಲವೆ? ಬಲ್ಲವನಂತೆ ಬುದ್ಧಿ ಹೇಳುವಿಯಾ ನನಗೆ? ಆಗಲಿ, ನಿನಗೆ ವಿಶ್ವಾಸ ಹುಟ್ಟುವಂತಹ ಮಾತು ಹೇಳುವೆ, ಆ ಮೇಲೆ ನಾನು ಪರಮಾತ್ಮ ಅಹುದೊ ಅಲ್ಲವೊ ಹೇಳುವಿಯಂತೆ! (ಗಂಭೀರವಾಗಿ) ನೋಡು, ಸರ್ವಜ್ಞನಾದ ಈ ಪರಮಾತ್ಮನು ಒಡನುಡಿಯುವ; ನೀನು ಹೆಸರಾದವನು; ನಾಟಕ ಬರೆಯುವವನು; ಈ ಹೊತ್ತು ಆಡಿತೋರಿಸುವವನು; ಅದೊಂದು ನಭೂತೋ ನಭವಿಷ್ಯತಿ ಪ್ರಸಂಗವೆನಿಸಿ—

**ನಾಟಕಕಾರ:**—(**ಆನಂದಾಶಿರೇಕದಿಂದ**) ಸಾಕು, ಸಾಕು. ಅಯ್ಯೋ, ಮಹಾರಾಯಾ, ಇದನ್ನೇ ಮೊದಲು ಹೇಳಬಾರದಾಗಿತ್ತೆ ? ನೀ ಪರಮಾತ್ಮ ಎನ್ನುವದರಲ್ಲಿ ನನಗೆ ಎಳ್ಳಷ್ಟು ಸಂಶಯ ಉಳಿಯುತ್ತಿದ್ದಿಲ್ಲ.

**ಪರಮಾತ್ಮ:**— (**ಪ್ರಸಾದಯುಕ್ತ ವಾಣಿಯಿಂದ**) ಭಕ್ತಶ್ರೇಷ್ಠ, ಕೇವಲ ನಿನ್ನ ಪರೀಕ್ಷೆ ಮಾಡಿದೆ. ನಿನ್ನ ಮೇಲೆ ಪ್ರಸನ್ನನಾದೆ; ಇದೋ ಪ್ರತ್ಯಕ್ಷನಾಗುವೆ. (**ಎಂದು ಮುಸುಕು ತೆಗೆಯಲು ಹೋಗುವನು.**)

**ನಾಟಕಕಾರ:**—(**ಅವನನ್ನು ತಡೆದು**) ಹಾ, ಅಷ್ಟೊಂದು ಅವಸರ ಬೇಡ. ಪ್ರತ್ಯಕ್ಷ ನೋಡದೆ ಪ್ರಸನ್ನನಾಗುವದು ಜಾಣರ ಲಕ್ಷಣವಲ್ಲ; ಕಾರಣ, ಒಳಗೆ ನಡೆ, ನೋಡುವಿಯಂತೆ.

(**ಇಬ್ಬರೂ ಕೈಹಿಡಿದುಕೊಂಡು ಹೋಗುವರು**)

---

# ಮೊದಲನೆಯ ಅಂಕು

## ಪ್ರವೇಶ ೧

( ಹರಿಹರರಾಯನ ಮನೆಯಲ್ಲಿ. ರಂಗಭೂಮಿಯ ಮೇಲೆ ಕಾಣುವುದು ಒಂದು ಕೋಣೆ. ರಾಯರು ವಕೀಲರಿದ್ದುದರಿಂದ ಒಳಹೊರಗಿನವರೆಲ್ಲರೂ, ಒಮ್ಮನಸ್ಸಿನಿಂದ 'ಕಚೇರಿ' ಯೆಂದು ಇದಕ್ಕೆ ಕರೆಯುವರು; ಕಚೇರಿಯ ತುಂಬ ಹಾಸಿದೆ; ನಟ್ಟ ನಡುವೆ ಎದುರಿನ ಗೋಡೆಗೆ ಒಂದು ತಕ್ಕೆ; ಅದರ ಮುಂದೆ ಒಂದು ಸಣ್ಣ ಮೇಜು; ಆ ಮೇಜಿನ ಮೇಲೆ ಕಾಗದಗಳು, ಬರೆಯುವ ಉಪಕರಣಗಳೂ ಕಂಡುಬರುವವು. ವಕೀಲರ ಆಸನದ ಬಲಕ್ಕೆ ಮೂರು ಕುರ್ಚಿಗಳೂ ಅವುಗಳ ಮುಂದೆ ಒಂದು ದುಂಡಾದ ಸಣ್ಣ ಮೇಜು ಇದೆ. ಆ ಮೇಜಿನ ಮೇಲೆ ಕೆಲವು ಇಂಗ್ಲೀಷ, ಕೆಲವು ಕನ್ನಡ ವೃತ್ತಪತ್ರಗಳು ಹರವಿಬಿದ್ದಿವೆ; ಸದ್ಯಕ್ಕೆ ಕಚೇರಿಯಲ್ಲಿ ಯಾರೂ ಇಲ್ಲ. ಇಷ್ಟರಲ್ಲಿ ಬಲಬದಿಯ ಕೋಣೆಯಲ್ಲಿ ರಾಯರು ಕೆಮ್ಮುವ ಸಪ್ಪಳವು ಕೇಳಬರುತ್ತದೆ. ಎಡಬದಿಯಿಂದ ಮನೋರಮಾ ಬರುವಳು. ಕೋಣೆಯ ಕಡೆಗೆ ನೋಡಿ ನಿಟ್ಟುಸುರು ಬಿಟ್ಟು, ಒಂದು ವೃತ್ತಪತ್ರವನ್ನು ಹಿಡಿದುಕೊಂಡು ಕುರ್ಚಿಯಲ್ಲಿ ಕೊಡ್ರುವಳು. ಗಡಿಯಾರದ ಸಪ್ಪಳ; ಅದನ್ನು ಕೇಳಿ ಲಗಬಗೆಯಿಂದ ಎದ್ದು, "ತಿಮ್ಮಾಜಿ, ತಿಮ್ಮಾಜಿ" ಎಂದು ಕರೆಯುವಳು. ಒಳಗಿನಿಂದ ತಿಮ್ಮಾಜಿಯು "ಬಂದೆ" ಎಂದು ಹೇಳುವನು. ಮನೋರಮಾ ಕುರ್ಚಿಯ ಹತ್ತಿರ ಬಂದು ಬಲಬದಿಯ ಕೋಣೆಯ ಕಡೆಗೆ ನೋಡುತ್ತ ನಿಲ್ಲುವಳು. ತಿಮ್ಮಾಜಿಯು ಬರುವನು. ತಾನು ದೊಡ್ಡ ವಕೀಲರ ಕಾರಕೂನನೆಂಬುವದನ್ನು ಜಗತ್ತಿಗೆ ಸಾರಿ ಹೇಳುವಂತೆ, ಅವಿಶ್ರಾಂತ ದುಡಿಯುವವರ ಹಣೇಬರಹವೇನೊ, ಎಂಬಂತೆ, ಉಪನೇತ್ರಗಳನ್ನು ಹಣೆಯಮೇಲಿಟ್ಟುಕೊಂಡಿರುವನು; ಅವನ ವಯಸ್ಸು ೫೫; ಆದುದರಿಂದ ೨೪ ವರ್ಷದ ಈ ಮನೋರಮೆಯು ಅವನ ಕೂಡ ಆದರದಿಂದ ನಡೆದುಕೊಳ್ಳುವಳು. ಅವನು ಒಂದು ಮುಂಗೈಯಿಂದ ಬಾಯಿ ಒರೆಸಿಕೊಳ್ಳುತ್ತಿರಲು ಅವಳು ನಗುವದಿಲ್ಲ. ತಿಮ್ಮಾಜಿಯು ಬಾಯಿಯನ್ನು ಒರೆಸಿಕೊಂಡು ಮೀಸೆಗಳನ್ನು ಸಾವರಿಸಿಕೊಳ್ಳುವವರೆಗೆ ತಡೆದು ಆ ಮೇಲೆ— )

ಮನೋರಮಾ:— ( ವೃತ್ತಪತ್ರದ ಕಡೆಗೆ ನೋಡುತ್ತ ) ತಿಮ್ಮಾಜಿ, ಆರೂವರೆ

ಗಂಟೆಯಾಯಿತು. ರಾಯರು ಸಭೆಗೆ ಹೋಗುವರು ಇನ್ನು ಅರ್ಧ ಗಂಟೆಯಲ್ಲಿ. ಅವರ ಕ್ಲಬ್ಬಿನ ಉಡುಪು—

ತಿಮ್ಮಾಜಿ:—(ಖೊಳ್ಳೆಂದು ನಗುವನು. ಮನೋರಮೆಯು ಮೊದಲು ಆಶ್ಚರ್ಯದಿಂದ ಆ ಮೇಲೆ ಕೊಂಚ ಕೋಪದಿಂದ ತನ್ನನ್ನು ನೋಡಲು ನಗೆ ತಡೆದು) ಮನೋರಮಾ, ನೋಡಿದಿಯಾ ಮುಪ್ಪಿನ ಮೋಜು? ಸಿದ್ಧತೆಯನ್ನು ಯಾವಾಗಲೋ ಮಾಡಿಟ್ಟಿರುವೆ ನೀನು ನನಗೆ ಹೇಳಿದಂತೆ.(ಮನೋರಮೆಯು ತಲೆದೂಗುವಳು.)(ಗಂಭೀರವಾಗಿ) ಮರೆತುಬಿಟ್ಟೆ ವಾಡಿಕೆಯಂತೆ. ನೀನು ಹೇಳಿದಿ ಕ್ಲಬ್ಬಿನ ಉಡುಪು ಎಂದು, ನನ್ನ ಲಕ್ಷ್ಯದಲ್ಲಿ ಉಳಿಯಿತು ಉಡುಪಿಯ ಕ್ಲಬ್ಬು ಎಂದು. (ಮನೋರಮೆಯು ನಗೆ ತಡೆಯುವಳು.)

ಮನೋರಮಾ:—ನಿಮ್ಮದಂತೂ ಕೀಸರವಾಯಿತು ಮರೆಯುವುದು (ನಗೆಯಿಂದ) ತಿಮ್ಮಾಜಿ, ಈ ಮರೆಯುವ ಚಟವು ಗಂಡಸರಿಗೆಯೇ ಇದೆ. ಹೆಂಗಸರಿಗೆ ಇಲ್ಲವಲ್ಲ.

ತಿಮ್ಮಾಜಿ:— ಹೆಂಗಸರನ್ನು ಪರಮಾತ್ಮನೇ ಮರೆತಿರುವನು.

ಮನೋರಮಾ:— ಇರಬಹುದು. (ಕುರ್ಚಿಯ ಮೇಲೆ ಕುಳಿತುಕೊಳ್ಳುವಳು. ಒಮ್ಮೆಲೆ ಏನೋ ಸ್ಮರಣೆಗೆ ಬಂದಂತಾಗಿ ಅವಳ ಮುಖವು ಕಳೆಗುಂದುವದು.) ಪರಮಾತ್ಮನು ಮರೆತಿರಬಹುದು ನಮ್ಮನ್ನು. ಪರಮಾತ್ಮನ ಶಿಷ್ಯರೂ ಮರೆತಿರುವರು ನಮ್ಮನ್ನು. (ನಗೆಯ ಸೋಗಿನಿಂದ) ಏನೇ ಇರಲಿ, ತಿಮ್ಮಾಜಿ, ಹೆಂಡರು-ಮಕ್ಕಳನ್ನು ಹಚ್ಚಿಕೊಳ್ಳಬಾರದೆಂದು ಈ ಮರೆಯುವ ಯುಕ್ತಿಯನ್ನು ಗಂಡಸರು ಸಾಧಿಸಿರುವರು ಅಲ್ಲವೇ?

ತಿಮಾ.ಜಿ:— ಹೆಂಡರು ಮಕ್ಕಳ—(ಒಮ್ಮೆಲೆ ಏನೋ ಸ್ಮರಣೆಗೆ ಬಂದು)

ಅಯ್ಯೋ, ತೀರ ನಗಿಗೇಡ! ಅವರ್ನ್ಯಾ ನನ್ನನ್ನು ಹುಚ್ಚ ನೆಂದು ತಿಳಿ. ಹೆಡ್ಡನೆಂದು ತಿಳಿ. ನೀನು ಹೆಂಡರು ಮಕ್ಕಳೆಂದಕೂಡಲೇ ನನ್ನ ಸ್ಮರಣೆಗೆ ಬಂದಿತು. (ನಾಚಿಕೆಯಿಂದ) ನಾಲ್ಕು ದಿವಸಗಳ ಹಿಂದೆ ನನಗೆ ಒಂದು ಗಂಡು ಮಗು ವಿನ ಲಾಭವಾಗಿದೆ.

ಮನೋರಮಾ:—(ಗಂಭೀರವಾಗಿ) ಅದನ್ನು ಹೇಳಲು ಮರೆತಿರಲಿಲ್ಲವೇ?

ತಿಮ್ಮಾಜಿ:— (ಸುಳ್ಳು ನಗೆಯಿಂದ) ನಾನೂ ಮರೆತಿದ್ದೆ. ಮಕ್ಕಳೂ ಮರೆತಿದ್ದರು. ಹದಿನೆಂಟು ವರ್ಷಗಳ ಮೇಲೆ ನನಗೆ ಈ ಗಂಡುಮಗು ಹುಟ್ಟಿದ್ದು.

ಮನೋರಮಾ:— ಸಾಕು ನಿಮ್ಮ ಬಡಿವಾರ. ಜಗತ್ತಿನಲ್ಲಿ ಕಾಲಿಡುವಾಗ್ಗೆ ಬುದ್ಧಿಯನ್ನೇ ಮರೆತು ಬಂದಿರುವಿರಿ.

ತಿಮ್ಮಾಜಿ:— ಆದಿರಲಿ, ಮನೋರಮಾ. ನನ್ನ ಬುದ್ಧಿಯಿಂದೇನು ಜಗತ್ತಿನ ತೂಕ ಹೆಚ್ಚಾಗಬೇಕಾಗಿಲ್ಲಾ. (ಅವಳನ್ನು ದಿಟ್ಟಿಸಿ ನೋಡಿ) ಇನ್ನೂ ನೀನು ಉಡುಪುತೊಡಪುಗಳನ್ನು ಧರಿಸಲಿಲ್ಲವೇಕೆ? ಸಭೆಯು ಏಳು ಗಂಟೆಗೆ. ಮಾನಪತ್ರಸಮಾರಂಭವಿದ್ದುದರಿಂದ ಊರೊಳಗಿನ ಪ್ರಮುಖ ಗಂಡಸ ಹೆಂಗಸರೆಲ್ಲ ಬರುವರು. ನೀನು ಹೀಗೆ ಕಣ್ವನ ಶಕುಂತಲೆಯಂತೆಯೇ ಹೋಗುವವಳೇನು? (ನಗುತ್ತ) ದುಷ್ಯಂತನ ರಾಣಿಯಂತೆ—

ಮನೋರಮಾ:— ನಾನು ಹೋಗುವದೇ ಇಲ್ಲ ಇಷ್ಟೊಂದು ನೀವು ಮೆಚ್ಚಿ ಮೆರಿಸಲಿಕ್ಕೆ. (ವೃತ್ತಪತ್ರವನ್ನು ದಿಟ್ಟಿಸುತ್ತ ಕುಳಿತುಕೊಳ್ಳುವಳು.)

ತಿಮ್ಮಾಜಿ:— (ಬೆಪ್ಪಾಗಿ) ನೀನು ಹೋಗುವದಿಲ್ಲ! (ಮನೋರಮೆಯು ತಲೆ

ಅಲ್ಲಾಡಿಸುವಳು.) ಹರಿಹರರಾಯರ ಮಾಸಪತ್ರಸಮಾರಂಭಕ್ಕೆ ಮನೋರಮೆಯು ಹೋಗುವದಿಲ್ಲ! (ಮತ್ತೆ ತಲೆ ಅಲ್ಲಾಡಿಸುವಳು.) ಛೀ, ಹುಚ್ಚೀ, ರಾಯರ ಮಾಸಪತ್ರಸಮಾರಂಭವೆಂದರೆ ರಾಜ್ಯಾಭಿಷೇಕವಿದ್ದಂತೆ. ಅರ್ಧಾಂಗಿಯಾದ ನೀನು ಪಟ್ಟದರಸಿ.

ಮನೋರಮಾ:— (ಉಸುರುಗರೆದು) ಪಟ್ಟವಿಲ್ಲ, ಅರಸಿಯುಲ್ಲ. ತಿಮ್ಮಾಜಿ, ನೀವೇ ನೋಡಿರಿ. ಅವರಿಗೆ ಯೋಗ್ಯತೆ ಇದೆ. ಮಾನ ಎದೆ. ಅವರಿಗೆ ಅಭಿಷೇಕವೂ ಒಪ್ಪುವದು. ರಾಜ್ಯ ಪದವೂ ಒಪ್ಪುವದು. ಇಂದಿನವರೆಗೆ ಮುಸಮುಚ್ಚಿ ಮ್ಯೆಮುರಿದು ದುಡಿದದ್ದಕ್ಕಾಗಿ ಅವರು ಉಪಭೋಗಿಸದಿದ್ದರೆ ಎಲ್ಲಿಂದಲೋ ಬಂದು ಅವರನ್ನು ಮದುವೆಯಾದ ಮಾತ್ರಕ್ಕೆ ನಾನು ಉಪಭೋಗಿಸಬೇಕೆ? ತಿಮ್ಮಾಜಿ, ಅವರ ಕೂಡ ನಾನು ಹೋಗುವದೆಂದರೆ ಅವರಿಗೆ ತೊಡಕು, ನನ್ನ ಕೆಡಕು. ಅವಸರದಲ್ಲಿ ಉಟ್ಟ ಒಲ್ಲಿ ನಾನು (ಕಳಕಳಿಯಿಂದ) ನನಗೆಯೆ ನಾಚಿಕೆ ಬರುವದು. ದೀಪದ ಕೆಳಗಿನ ಕತ್ತಲೆಯಂತೆ ಕವಿದಿರುವೆ. (ನಿರಾಶೆಯಿಂದ) ಓದು ಬರೆಯುವ ವಿದ್ಯೆ ಕೂಡ ನನಗಿಲ್ಲ.

ತಿಮ್ಮಾಜಿ:— (ಅಣಕಿಸಿನಂದ ತಲೆದೂಗುತ್ತ) ಓಹೋ ವಿದ್ಯೆಯಿಲ್ಲವೆಂದೇ ಇಷ್ಟೊಂದು ಬುದ್ಧಿಯ ಮಾತು ಹೇಳಹತ್ತಿರುವಿಯಲ್ಲವೇ? ಮನೋರಮಾ, ಓದುಬರೆಯುವದು ವಿದ್ಯೆಯೆಂದು ಯಾವ ಮಹಾತ್ಮನು ನಿನಗೆ ಕಲಿಸಿದನಮ್ಮ! ಓದಿದ್ದನ್ನು ಬರೆಯುವದು ಕಳ್ಳವಿದ್ಯೆ; ಬರೆದದ್ದನ್ನು ಓದುವದು ಸುಳ್ಳು ವಿದ್ಯೆ. ಸ್ತ್ರೀಯರಿಗೂ ಬಡವರಿಗೂ

ಶಿಕ್ಷಣ ಕೊಡಬೇಕೆಂದು, ತಮ್ಮ ಆಯುಷ್ಯವನ್ನು ದಂಡಿಸುವ ಹರಿಹರರಾಯರ ಹೆಂಡತಿ ನೀನು, ಮರೆಯಬೇಡ.

ಮನೋರಮಾ:—(ನಗೆಯಿಂದ) ಮರೆಯುವ ವಿದ್ಯೆ ಹೆಂಗಸರದಲ್ಲ. ಆದರೆ—

ತಿಮ್ಮಾಜಿ:— ಆದರೆ ಹೆಂಗಸರನ್ನು ಮರೆಯುವ ವಿದ್ಯೆ ಗಂಡಸರದಲ್ಲ. (ಕಳಕಳಿಯಿಂದ) ಮನೋರಮಾ, ತಿಳಿದು ನೋಡು. ಮೊದಲನೆಯ ಹೆಂಡತಿಯು ಕರ್ಮದ ಹಾವು; ಎರಡನೆಯ ಹೆಂಡತಿಯು ಮರ್ಮದ ಜೀವ! ನೀನು ಹರಿಹರ ರಾಯರ ಎರಡನೆಯ ಹೆಂಡತಿ; ಬುದ್ಧಿಯಿಂದ ಜೋಡಿಕೊಂಡ ಸಹಧರ್ಮಚಾರಿಣಿ. ತಿಳಿದುಕೊಂಡಷ್ಟು ನೀನು ದಡ್ಡಳಿದ್ದರೆ, ತಿಳಿಯಲಾರದಷ್ಟು ದಡ್ಡನು ಹರಿಹರ ರಾಯನಲ್ಲವೆ ?

ಮನೋರಮಾ:— (ನಕ್ಕು) ವಕೀಲರ ಸಹವಾಸದಲ್ಲಿ ನನ್ನಕಿಂತ ಹೆಚ್ಚು ದಿನ ಕಳೆದವರು ನೀವು, ಮಾತಿಗೆ ಮಾತು ಬೆಳೆಸುವಿರಿ. ನೀವು ಬೇಕಾದಷ್ಟು ಹೇಳಿರಿ ನಾನೇನು ಅವರ ಕೂಡ ಸಭೆಗೆ ಹೋಗುವದಿಲ್ಲ, ಸಮಾರಂಭಕ್ಕೆ ಹೋಗುವದಿ...

ತಿಮ್ಮಾಜಿ:— ( ನಗುತ್ತ ) ಆಗಲಿ, ಅಕ್ಕಸಾಲಿಗನೇ ಕಿವಿ ಚುಚ್ಚಲಿ.

(ಎಂದು ಕೋಣೆಯ ಕಡೆಗೆ ನೋಡುವನು. ಇಷ್ಟರಲ್ಲಿ ಹರಿಹರ ರಾಯನೂ ವಿದ್ಯಾಧರನೂ ಕೋಣೆಯಿಂದ ಹೊರಬೀಳುವರು. ನಗೆಯಿಂದ ಇಬ್ಬರ ಮುಖದಲ್ಲಿ ಕಳೆಯೇರಿ ಇಬ್ಬರೂ ತರುಣರಂತೆ ಕಾಣುವದೇನೋ ನಿಜ. ವಿದ್ಯಾಧರನು ವಯಸ್ಸಿನಿಂದ ತರುಣನಿದ್ದರೆ ಹರಿಹರರಾಯನು ಉತ್ಸಾಹದಿಂದ ತರುಣನಿರುವನು. ವಿದ್ಯಾಧರನು ಡಾಕ್ಟರನು. ಅಂದರೆ ವೈದ್ಯಕೀ ಪರೀಕ್ಷೆ ಪಾರು ಮಾಡಿಕೊಂಡಿರುವದರಿಂದ ಔಷಧದ ಅಂಗಡಿಯನ್ನೂ ಚಿಕಿತ್ಸಕನ ನೋಗನ್ನೂ ಹಾಕಿರುವನು. ಯುರೋಪಿಯ ಉಡುಪು ತೊಡವು; ಸ್ತ್ರೀಯರ ಕೂಡ ಮನ

ಬಿಚ್ಚಿ ಮಾತನಾಡುವದರಿಂದ ಅವನು ಅವಿವಾಹಿತನೆಂದು ನಿಶ್ಯಂಕೆ ಯಾಗಿ ಹೇಳಬಹುದು. ಏನು ಅದೊಂದು ಯುರೋಪಿಯ ಆಚಾರವೋ ? ನಮಗೆ ತಿಳಿಯದ ವಿಷಯ. ಅವನ ವಯಸ್ಸು ಮಾತ್ರ ೨೭-೨೮ ಇರಬಹುದೆಂಬ ನಮ್ಮ ಕಲ್ಪನೆ. ಹರಿಹರರಾಯನ ಮಾತು ಬೇರೆ; ಅಂದರೆ ನಮಗೆ ಗೊತ್ತಿದ್ದ ವಿಷಯ. ಅವನ ವಯಸ್ಸು ೫೦, ಬುದ್ಧಿಯು ಹಣೆಯಂತೆ ವಿಶಾಲವಾದುದು. ದುಡಿದು ಹಣ ಗಳಿಸಿದ ಹೊಣೆಗಾರಿಕೆಯ ಧನಿಕರಂತೆ ಖಾದಿಯನ್ನು—ಆದರೂ ಓರಣದಿಂದ ಉಟ್ಟಿರುವನು. ಮುಂದಾಳುತನದ ಕಿರೀಟವಾದ ರುಮಾಲವನ್ನು ಸುತ್ತಿಕೊಂಡಿರುವನು. ಬಾಯಿಬಿಚ್ಚಿ ನಗುವದು ದೊಡ್ಡಿಸ್ತನದ ಲಕ್ಷಣವಲ್ಲವೆಂದು ಒಮ್ಮೊಮ್ಮೆ ಸ್ಮರಣೆಗೆ ಬಂದು ಗಂಭೀರ ಮುದ್ರೆಯನ್ನು ತಾಳುವನು. ಹೆಚ್ಚಿಗೆ ಹೇಳುವದೇನು ? ದುಡ್ಡು ಗಳಿಸಿಟ್ಟ ಮೇಲೆ ಲೋಕಸಂಗ್ರಹಕ್ಕಾಗಿ ದೇಹ ಸವೆಸುವದು ವಕೀಲರ ವಾಡಿಕೆಯ ಧರ್ಮವಿದ್ದು, ಹರಿಹರರಾಯನು ಮಾತ್ರ ಅದರಲ್ಲಿಯೂ ಯಶಸ್ಸು ದೊರಕಿಸಿರುವನೆಂದು ಹೇಳಬಹುದು. ಇರಲಿ, ನಗುವದು ಶರೀರಕ್ಕೆ ಹಿತಕರವೆಂದು, ಗ್ರಂಥಗಳಲ್ಲಿ ಓದಿಕೊಂಡು ಮನಗಂಡ—)

ವಿದ್ಯಾಧರಃ— (ನಗುತ್ತ) ಆಗಲಿ, ಅಕ್ಕಸಾಲಿಗನೇ ಕಿವಿ ಚುಚ್ಚಲಿ (ಎಂದು ಮನೋರಮೆಯ ಕಡೆಗೆ ನೋಡುವನು. ಪಾಪ ಬಡವರ ರೋಮಾಂಚದಂತೆ ಅವಳು ನಿರುಪಾಯವೆಂದೇ ಎದ್ದು ನಿಲ್ಲುವಳು. ಹರಿಹರರಾಯನು ಮೇಜಿನ ಹತ್ತರ ಬಂದು ವೃತ್ತಪತ್ರವನ್ನು ನೋಡಹೋಗಲು ಮನೋರಮೆಯು ನಾಚಿ ತನ್ನ ಕೈಯೊಳಗಿನ ಪತ್ರವನ್ನು ಅವನಿಗೆ ಕೊಡುವಳು. ರಾಯರೂ ಉಸ್ಸೆಂದು ಕುಳಿತುಕೊಳ್ಳುವರು.)

ವಿದ್ಯಾಧರಃ— ಮನೋರಮಾ, ನಾನು ಹೇಳಿದರೆ ರಾಯರು ಕೇಳಲಿಲ್ಲ, ಕೇಳುವದಿಲ್ಲ, ಕೇಳುವಂತಿಲ್ಲ. ಮುಂಜಾವಿನಿಂದ ಸಂಜೆಯತನಕ ದುಡಿಯುವರು. ಏನಿಲ್ಲೆಂದರೂ ಅವರಿಗೆ ಆರು ತಿಂಗಳ ವಿಶ್ರಾಂತಿ ಬೇಕು.

ಮನೋರಮಾಃ—(ಗಂಡನ ಕಡೆಗೆ ನೋಡುತ್ತ) ನಾನು—

ಹರಿಹರರಾಯಃ—(ಮೇಲಕ್ಕೆ ನೋಡದೆಯೆ) ತಿಮ್ಮಾಜಿ, ಸಭೆಯಿಂದ ತಿರುಗಿ ಬರಲು ನನಗೆ ತಡವಾಗುವದು. ನಾಳಿನ ದಿವಸ ಅನಾಥ ವಿದ್ಯಾರ್ಥಿಗೃಹಕ್ಕೆ ಹಣ ಕಳಿಸಬೇಕಾಗಿದೆ; ವಿಧವಾ-ಪುನರುಜ್ಜೀವನ-ಸಂಸ್ಥೆಯ ಕಾರ್ಯದರ್ಶಿಯ ಪತ್ರಕ್ಕೆ ಉತ್ತರ ಬರೆಯಬೇಕಾಗಿದೆ; ಆಪದ್ಧರ್ಮಾಶ್ರಮದ ಗುರುಗಳಿಗೆ ನಿಮಂತ್ರಣ ಕಳಿಸಬೇಕಾಗಿದೆ; ಸೋಮೇಶ್ವರ ಶಿವಪ್ಪನ ಕಡೆಯಿಂದ ಇನ್ನೂ ಹಣ ಬಂದಿಲ್ಲ. ಇಷ್ಟೆಲ್ಲ ಕೆಲಸವನ್ನು ನೀನೆ ಮುಗಿಸಿ ಬಿಡು. (ಎದ್ದು ನಿಂತು) ಮನೋರಮಾ, ಕಡೆಗೆ ನೀನು ಬರಬಾರದೆಂದೇ ನಿಶ್ಚಯಿಸಿದೆ? (ಮನೋರಮೆಯು ಕೆಳಗೆ ನೋಡುತ್ತ ನಿಂತು ಬಿಡುವಳು.) ವಿದ್ಯಾಧರ, ಶರೀರದಂತೆ ಮನಸ್ಸಿನ ಬೇನೆಯನ್ನಾದರೂ ಪರೀಕ್ಷಿಸುವ ವಿದ್ಯೆ ಕಲಿತಿದ್ದರೆ ನಮ್ಮ ಮನೋರಮೆಗೆ ಔಷಧವನ್ನಾದರೂ ಹೇಳಬಾರದೇ! (ಮನೋರಮೆಗೆ) ಜೀವಕ್ಕೆ ಅಪಾಯವಿದ್ದಲ್ಲಿ ವೈದ್ಯರಿಗೂ ವಕೀಲರಿಗೂ ಸುಳ್ಳು ಹೇಳಬಾರದಂತೆ. (ಮನೋರಮೆಯು ಕೋಣೆಯೊಳಗೆ ಹೋಗುವಳು.) ಯಾಕೆ? ನನ್ನ ಮಾತಿಗೆ ಸಿಟ್ಟು ಬಂದಿತೆ? (ಮನೋರಮೆಯು ಒಳಗಿನಿಂದ ಕೈಬತ್ತನ್ನು ತಂದು ಗಂಡನಿಗೆ ಒಪ್ಪಿಸುವಳು. ರಾಯರು ಅದನ್ನು ಹಿಡಿದುಕೊಂಡು ಮುಗುಳು ನಗೆಯಿಂದ ಹೊರಡುವರು.) ಏನೇ ಆಗಲಿ, ಬೆತ್ತವು ನಿನ್ನ ಕೈಬಿಟ್ಟ ಮೇಲೆ ಸಿಟ್ಟು ಬಂದರೆ ಅಡ್ಡಿ ಇಲ್ಲ. (ತಿರುಗಿ ನಿಂತು) ನನಗೆ ಬಹಳೇ ತಡವಾದೀತು ಬರಲಿಕ್ಕೆ. (ಹೋಗುವನು).

ವಿದ್ಯಾಧರಃ— (ಸಮಾಧಾನದಿಂದ ಕುರ್ಚಿಯ ಮೇಲೆ ಬಿದ್ದುಕೊಂಡು ಎರಡೂ ಕಾಲುಗಳನ್ನು ನೀಳವಾಗಿ ಮೇಜಿನ ಮೇಲಿಟ್ಟು ತಿಮ್ಮಾಜಿಗೆ) ತಿಮ್ಮಾಜಿ, ಕಲಿಯುಗದಲ್ಲಿ ಚಂದ್ರಗ್ರಹಣವು ಹಗಲು ಹೊತ್ತಿನಲ್ಲಿಯೇ ಕಾಣಿಸುವದೇನು? (ಮನೋರಮೆಯು ಸಿಟ್ಟಿನಿಂದ

ಅವನ ತೆಡೆಗೆ ನೋಡಿ ಲಗಬಗೆಯಿಂದ ಒಳಕ್ಕೆ ಹೋಗುವಳು. ತಿಮ್ಮಾಜಿಯು ಬಾಗಿಲವರೆಗೆ ಹೋಗಿ ಅವಳು ಒಳಕ್ಕೆ ಹೋದದ್ದನ್ನು ನೋಡಿ ವಿದ್ಯಾಧರನ ಸಮೀಪಕ್ಕೆ ಬಂದು ನಿಂತುಕೊಂಡು)

ತಿಮ್ಮಾಜಿಃ— (ಮೆಲ್ಲಗೆ) ವಿದ್ಯಾಧರ, ನಿನಗೊಂದು ಮಾತು ಹೇಳಬೇಕೆಂದು ಮಾಡಿರುವೆ.

ವಿದ್ಯಾಧರಃ— (ಅಣಕಿಸಿಂದ ಕೈಮುಗಿದು ತಲೆಬಾಗಿ) ಮುತ್ತ್ಯಯ್ಯಾ ಹೆತ್ರಾತ್ರಾ ಆಜ್ಞೆಯಾಗಲಿ.

ತಿಮ್ಮಾಜಿಃ— (ಅವನ ಸೋಗನ್ನು ಲಕ್ಷಕ್ಕೆ ತಾರದೆ) ಮನೋರಮೆಯು ಕೂಡ ಅಷ್ಟೊಂದು ಸಲಿಗೆ ಬೇಡ.

ವಿದ್ಯಾಧರಃ— (ಅವನನ್ನು ದಿಟ್ಟಿಸುತ್ತ) ನೀನು ಹರಿಹರರಾಯನ ಕಾರಕೂನನೋ? ಮನೋರಮೆಯು ಕಾರಕೂನನೋ?

ತಿಮ್ಮಾಜಿಃ— ತನ್ನ ಕೆಲಸ ತನಗೆ ಗೊತ್ತಿದ್ದ ಕಾರಕೂನ ನಾನು. ಮಂದಿಯ ಹೊಲಸಿನಲ್ಲಿ ಕೈಹಾಕುವ ವೈದ್ಯನಲ್ಲ.

ವಿದ್ಯಾಧರಃ— (ಅಣಕಿಸುತ್ತ) ಛೀ! ಛೀ! ವೈದ್ಯನಲ್ಲ. ಹೊಲಸಿನಲ್ಲಿ ಕೈ ಹಾಕಿ ತೊಳೆಯುವುದು ವೈದ್ಯನ ಕೆಲಸ, ತೊಳೆದ ಕೈಯ್ಯನ್ನು ಹೊಲಸಿನಲ್ಲಿ ಹಾಕುವದು ನಿನ್ನ ಕೆಲಸ. ನೀನು ವೈದ್ಯನೇ? ಛೆ!

ತಿಮ್ಮಾಜಿಃ— (ಸಮಾಧಾನದಿಂದ) ನಾನು ಹೇಳುವದನ್ನು ಕೇಳುವಿಯೊ-

ವಿದ್ಯಾಧರಃ— (ತಿರಸ್ಕಾರದಿಂದ) ನೀನು ಹೇಳುವದನ್ನು! ತಾನು ಹೇಳುವನಂತೆ, ನಾನು ಕೇಳಿಕೊಳ್ಳಬೇಕಂತೆ! ತನ್ನ ಕೆಲಸ ಬಿಟ್ಟು ಎರಡನೆಯವರ ಕೆಲಸದಲ್ಲಿ ಕೈ ಹಾಕಬಾರದೆಂಬುದು ಮುಪ್ಪಿನಲ್ಲಿಯೂ ಕೂಡ ತಿಳಿಯಬಾರದೆ ಇವರಿಗೆ? (ವೃತ್ತಪತ್ರವನ್ನು ಓದಲು ಯತ್ನಿಸುವನು.)

ತಿಮ್ಮಾಜಿ:— ಮುಪ್ಪಿನ ಕೆಲಸವು ತಿಳಿದುಕೊಳ್ಳುವದಲ್ಲ; ತಿಳುಹಿಸಿ ಕೊಡುವದು. ವಿದ್ಯಾಧರಾ, ಎರಡನೆಯವರ ಕೆಲಸದಲ್ಲಿ ಕೈಹಾಕಲು ನನಗೆ ಅಧಿಕಾರವಿದೆ, ಎರಡು ತರದ ಅಧಿಕಾರ. (ವಿದ್ಯಾಧರನು ಆಶ್ಚರ್ಯದಿಂದಲೂ, ಸಂಶಯದಿಂದಲೂ ನೋಡಲು, ನಗೆಯಿಂದ) ಮುಪ್ಪಿನ ಅಧಿಕಾರವಲ್ಲ. ಧರ್ಮದ ಅಧಿಕಾರ, ರೂಢಿಯ ಅಧಿಕಾರ. ನನ್ನಷ್ಟು ಯೋಗ್ಯತೆ ಯಾರಿಗಿದೆ ಎರಡನೆಯವರ ಕೆಲಸದಲ್ಲಿ ಕೈ ಹಾಕಲಿಕ್ಕೆ? ಧರ್ಮದಿಂದ ಬ್ರಾಹ್ಮಣ ಜಾತಿಯವನು, ರೂಢಿಯಿಂದ ವಕೀಲರ ವ್ಯವಸಾಯದವನು. (ವಿದ್ಯಾಧರನು ತಿರಸ್ಕಾರದಿಂದ ನಗುವನು). (ಗಂಭೀರವಾಗಿ) ಇದಲ್ಲದೆ ನಾವು ವ್ಯವಸಾಯ ಬಂಧುಗಳು. ಸಿಟ್ಟಿಗೇಳಬೇಡ, ವಿದ್ಯಾಧರಾ, ನಾವಿಬ್ಬರೂ ಬದುಕಿ ಬಾಳಿದ್ದು ಹರಿಹರರಾಯನ ಅನ್ನದಿಂದಲೆ. ಕೆಲಸ ಕೊಟ್ಟು ನನ್ನನ್ನು ಉಣ್ಣಿಸಿದರು, ಕಲಿಸಿ ಕೊಟ್ಟು ನಿನ್ನನ್ನು ಉಣ್ಣಿಸುವರು. ನನ್ನಂತೆ ನಿನಗೂ ಅವರು ಸಾಕಿ ಸಲುಹಿದ ತಂದೆ. ನಮ್ಮ ನಿಮ್ಮ ಜೀವವನ್ನು ಅವರು ಕಾಪಾಡುವಂತೆ, ನಮ್ಮ ನಮ್ಮ ಮಾನಮರ್ಯಾದೆಯನ್ನು ನಾವು ಕಾಪಾಡಬೇಕು.

ವಿದ್ಯಾಧರ:— (ಸಂಶಯದಿಂದ) ನಿನ್ನ ಮಾತಿನ ಅರ್ಥವೇ ಆಗುವಂತಿಲ್ಲ.

ತಿಮ್ಮಾಜಿ:— (ಕೈಚಲ್ಲಿ) ಮಾನಮರ್ಯಾದೆಗಳ ಮಾತು. ಇದರ ಅರ್ಥವಾಗಲಿಲ್ಲವೆಂದರೆ ನಿರುಪಾಯ.

ವಿದ್ಯಾಧರ:— ಮನೋರಮೆಯ ಮಾತು ಎಲ್ಲಿ! ಹರಿಹರರಾಯರು ನನ್ನನ್ನು ಸಾಕಿ ಸಲುಹಿದ ಮಾತು ಎಲ್ಲಿ! ಮಾನಮರ್ಯಾದೆ ಎಲ್ಲಿ!

ತಿಮ್ಮಾಜಿ:— ಇದ್ದಲ್ಲಿ ಮಾನಮರ್ಯಾದೆ, ಮನೋರಮೆಯಲ್ಲಿ ಮಾನ ಮರ್ಯಾದೆ. ವಿದ್ಯಾಧರಾ, ಏನೂ ತಿಳಿಯದವನಂತೆ ಮಾಡಬೇಡ. ಮನೋರಮೆಯ ತಂದೆಯು ತನ್ನ ಮಗಳನ್ನು ನಿನಗೆ ಮದುವೆ ಮಾಡಿ ಕೊಡಬೇಕೆಂದದ್ದು ಎಲ್ಲರಿಗೂ ಗೊತ್ತಿದ್ದ ಮಾತು. ಮನೋರಮೆಗೂ ಗೊತ್ತಿದೆ. ಹರಿಹರರಾಯರಿಗೂ ಗೊತ್ತಿದೆ. ಹಣದ ಪೇಚಾಟದಲ್ಲಿ ಸಿಕ್ಕು ಮನೋರಮೆಯನ್ನು ನಮ್ಮ ರಾಯರಿಗೆ ಒಪ್ಪಿಸಿದ್ದು, ನಮ್ಮಂತೆ ನಿನಗೂ ಗೊತ್ತಿದೆ.

ವಿದ್ಯಾಧರ:— ( ಕೊಂಚ ಕೋಪದಿಂದ ) ಗೊತ್ತಿದೆ, ಗೊತ್ತಿದೆ ಎಂದು ನನ್ನ ಮುಂದೆ ಹೇಳುವಿ, ನಾನೇನು ಕಚೇರಿಯಲ್ಲಿ ಕಾಲಿಡುವ ಸಾಕ್ಷಿದಾರನೆಂದು ತಿಳಿದಿರುವೆಯೊ ಏನು ?

ತಿಮ್ಮಾಜಿ:— ಗೊತ್ತಿದ್ದರೂ ಗೊತ್ತಿಲ್ಲದವನಂತೆ ಮುಚ್ಚಿಡುವಿ, ಇದೇನು ಶ್ರೀಮಂತರ ಬೇನೆಯೆಂದು ತಿಳಿದಿರುವೆಯೊ ಏನು ? ನಿನ್ನನ್ನು ನೋಡಿದಕೂಡಲೆ ಮನೋರಮೆಯ ಮನಸ್ಸಿನ ಸ್ಥಿತಿಯು ಏನಾಗುವದು ? ನಿನ್ನ ಸಲಿಗೆಯ ಮಾತನ್ನು ಕೇಳಿ ಅವಳ ಎದೆ ಹೌಹಾರಿ ಹಾರಲಿಕ್ಕಿಲ್ಲವೆ? ನೀನು ಅವಳೊಡನೆ ನಡೆದುಕೊಳ್ಳುವದನ್ನು ನೋಡಿ ಜನರು ಆಡಿಕೊಳ್ಳುವದಿಲ್ಲವೆ?

ವಿದ್ಯಾಧರ:— ( ಎದ್ದು ನಿಂತು ) ಡಾಕ್ತರನೆಂದು ನನ್ನನ್ನು ಕರೆಯಿಸುವರು; ನಾನು ಬರುವೆ.

ತಿಮ್ಮಾಜಿ:— ಏನೂ ಅಡ್ಡಿಯಿಲ್ಲ, ಡಾಕ್ತರನಂತೆ ಬೇನೆಯಿಂದ ಉಳಿಸು. ಬೇನೆಯನ್ನು ಬೆಳಿಸಬೇಡ.

ವಿದ್ಯಾಧರ:— ( ಗಟ್ಟಿಯಾಗಿ ನಕ್ಕು ) ಹಾ, ಹಾ, ನಿನ್ನ ಮಾತನ್ನು

ರಾಯರು ಕೇಳಿದ್ದರೆ ಬಿದ್ದು ಬಿದ್ದು ನಗುತ್ತಿದ್ದರು. ಎಷ್ಟಾದರೂ ನೀನು ಹಳಬನು. ಸ್ತ್ರೀಯರ ಕೂಡ ಸಲಿಗೆ ಯೆಂದರೆ ಸಮಾಜದ ಧೂಮಕೇತು ಎಂದು ಕಲ್ಪನೆ ಅಲ್ಲವೆ? ತಿಮ್ಮಾಜಿ, ಸಮಾಧಾನದಿಂದಿರು; ಮನೋರಮೆಯು ನನ್ನ ಗೆಳತಿಯು; ನನ್ನ ಸಾಕಿ ಸಲುಹಿದ ಹರಿಹರರಾಯನ ಹೆಂಡತಿ. ಆಯಿತೆ? (ನಗುವನು. ಒಳಗಿನಿಂದ "ತಿಮ್ಮಾಜಿ," "ತಿಮ್ಮಾಜಿ" ಎಂದು ಮೋಹಿನಿಯು ಓಡುತ್ತ ಬರುವಳು. ವಿದ್ಯಾಧರನನ್ನು ನೋಡಿ ನಾಚಿದಳೇನೋ ನಿಜ. ಆದರೆ ಆ ನಾಚುವಿಕೆಯ ಅರ್ಥವನ್ನು ಮಾತ್ರ ಎಲ್ಲರೂ ತಪ್ಪು ತಿಳಿದು ಕೊಳ್ಳುವರೆಂದು ಅದರ ವಿಷಯವಾಗಿ ಕೊಂಚ ವಿರಳವಾಗಿ ಬರೆಯ ಬೇಕಾಗಿದೆ. ನಾಯಕನನ್ನು ನೋಡಿ ನಾಯಿಕೆಯು ನಾಚುವದು ಬೇರೆ. ಅದು – ಇರಲಿ, ಅದು ವರ್ಣನೆಯ ವಿಷಯವಲ್ಲ. ಅದನ್ನು ವರ್ಣಿಸುವದೂ ಶಕ್ಯವಿಲ್ಲ. ಆದರೆ ನಮ್ಮ ಮೋಹಿನಿಯ ನಾಚುವಿಕೆಯು ಉಸುರಾಡಿಸುವಂತೆ! ಅಷ್ಟೊಂದು ಸ್ವಾಭಾವಿಕ. ಮೋಹಿನಿಯ ವಯಸ್ಸು ೧೪; ಅಂದರೆ ಬಾಲೆಯೂ ಅಲ್ಲ, ಯುವತಿಯೂ ಅಲ್ಲ. ಹುಣ್ಣಿವೆಯ ನಸುಕಿನಂತೆ. ಬಾಲ್ಯದ ಬೆಳದಿಂಗಳು ಜಾರುತ್ತಲಿದೆ; ಯೌವನದ ಅರುಣೋದಯವು ಕೆಂಪೇರಹತ್ತಿದೆ. ನಸುಕು ಕೂಡ ಎರಡನೆಯವರ ಸಂಪರ್ಕದಲ್ಲಿ ಜುಮ್ಮೆಂದು ಇಬ್ಬನ್ನಿಗಳಿಂದ ರೋಮಾಂಚಿತವಾಗುವದಿಲ್ಲವೆ? ಅಷ್ಟೊಂದು ಮನೋಹರ, ಅಷ್ಟೊಂದು ಶಾಂತ, ಅಷ್ಟೊಂದು ಸ್ವಾಭಾವಿಕ ನಮ್ಮ ಮೋಹಿನಿಯ ನಾಚುವಿಕೆಯು. ಇರಲಿ, ಮೋಹಿನಿಯು ನಾಚಿದಳು. ಹೊಸ ಸೀರೆ ಉಟ್ಟದ್ದು, ಹೂಮಾಲೆ ಮುಡಿದದ್ದು, ಇಷ್ಟಾದ ಮೇಲೆ ನಾಚುವದೇನಾಶ್ಚರ್ಯ? ಇರಲಿ, ಮೋಹಿನಿಯು ನಾಚಿದಳು. ಕೈಯೊಳಗೆ ತನ್ನ ತಂದೆಗೆ ಅರ್ಪಣ ಮಾಡತಕ್ಕ ಮಾನಪತ್ರದ ಪ್ರತಿಯೊಂದನ್ನು ಹಿಡಿದದ್ದು. ಅದನ್ನು ಅವಸರದಲ್ಲಿ ತಿಮ್ಮಾಜಿಗೆ ತೋರಿಸುವಷ್ಟರಲ್ಲಿ ಕನಕ ಕಂಕಣಗಳಿಂದ ಶೋಭಿತವಾದ ತನ್ನ ಕೋಮಲ ಕೈಗಳು ವಿದ್ಯಾಧರನಿಗೆ- ಇರಲಿ, ಮೋಹಿನಿಯು ನಾಚಿದಳು. ಇದನ್ನೆಲ್ಲ ನೋಡಿ ನಗುತ್ತ)

**ತಿಮ್ಮಾಜಿ:—** ಏನವ್ಮಾ ಮನಮೋಹಿನಿ, ಅಮೃತದ ಕೊಡವನ್ನು ಹೊತ್ತುಕೊಂಡು ಬಂದಿರುವೆಯೊ ಏನು? ಕೈಗಳು ಎಷ್ಟು ಕೆಂಪಾಗಿವೆಯಲ್ಲ!

**ಮೋಹಿನಿ:—** (**ನಾಚಿ ಕೆಳಗೆ ನೋಡುತ್ತ**) ಇಲ್ಲ........ ಸಭೆಯಲ್ಲಿ ತಂದೆಯ ಹತ್ತಿರ ಎರಡು ಕುರ್ಚಿಗಳನ್ನು ಹಾಕಿಸಿರುವೆ. ಅಮ್ಮನವರು ಬರುವದಿಲ್ಲವಂತೆ.

**ತಿಮ್ಮಾಜಿ:—** ಯಾಕೆ? ಕುರ್ಚಿಯ ಮೇಲೆ ನಿನ್ನ ಮತ್ತು ಅಮ್ಮನವರ ಹೆಸರು ಬರೆಯಿಸಿರುವೆಯೇನು?

**ಮೋಹಿನಿ:—** (**ಮೊದಲಿನಂತೆಯೆ**) ಒಂದರ ಮೇಲೆ ಹೆಸರಿದೆ, ಇನ್ನೊಂದು ಬರಿಯದು. (**ಇಷ್ಟರಲ್ಲಿ ಅವಳ ಸಾಹಜಿಕ ಧೈರ್ಯವು ತಲೆದೋರುವದು. ಅದೇಕೆ? ಮೇಲಿನ ಮಾತನ್ನು ಮೇಲೆ ಮುಖಮಾಡಿ ಎರಡನೆಯ ಸಲ ಗಟ್ಟಿಯಾಗಿ ನುಡಿದಳು**).

**ತಿಮ್ಮಾಜಿ:—** ಹೆಸರು ಯಾರದು? ಅಮ್ಮನವರದೇನು?

**ಮೋಹಿನಿ:—** ಇಲ್ಲ. ಹೆಸರಿದ್ದದ್ದು ಡಾಕ್ತರರ ಕುರ್ಚಿ, ಇನ್ನೊಂದು ಅಮ್ಮನವರಿಗಾಗಿ. ಆದರೆ (**ಕಳಕಳಿಯಿಂದ ತಿಮ್ಮಾಜಿಯ ಮುಖವನ್ನು ನೋಡುತ್ತ**) ಅವರು ಹೋಗುವದಿಲ್ಲವಂತೆ.

**ತಿಮ್ಮಾಜಿ:—** ಅವರಿಗೆ ಕೋಪ ಬಂದಿದೆ. ನೋಡಿದೆಯಾ ವಿದ್ಯಾಧರಾ, ನಿನ್ನ ಹತ್ತಿರ ತನ್ನ ಸಲುವಾಗಿ ಕುರ್ಚಿ ಹಾಕಿಸಿಕೊಂಡು ಅಮ್ಮನವರಿಗೆ ಹೋಗೆಂದರೆ ಹೋಗುವರೇ ಅವರು? (**ಒಳಗಿನಿಂದ ಮನೋರಮೆಯೂ ಕಾಮಿಯೂ ಬರುವರು. ಕಾಮಿಯು ತಿಮ್ಮಾಜಿಯ ಮಗ. ಅವನ ನಿಜವಾದ ಹೆಸರು ಏನೆಂಬುದು ಅವನ ತಂದೆತಾಯಿಗಳಿಗೇ ಗೊತ್ತು. ಮನೆಯೊಳಗೆ ಹದಿನೆಂಟು ವರ್ಷಗಳ ವರೆಗೆ ಅವನಿಗೆ ಕಾಮಿಯೆಂದು ಕರೆಯುತ್ತಿರುವದೇನೊ ವಸ್ತುಸ್ಥಿತಿ. ವಯಸ್ಸಿನಿಂದ ಎಳೆಯನಾದರೂ ವಿಚಾರದಿಂದ ಬೆಳೆದವನೇನೊ**

ಎನ್ನುವಹಾಗೆ ಕಾಮಿಯ ಮುಖಚರ್ಯೆ. ತಲೆಯ ಮೇಲೆ ಹರವಾಗಿ ಕೂದಲು ಬೆಳೆಸಿದ್ದಾನೆ. ಬಿಳಿದಾದ ಒಂದು ಷೈರಣ, ಕೀಡಿ ಉಟ್ಟ ಬಿಳಿದಾದ ಒಂದು ದೋತರ, ಹಿರಿಯರನ್ನು ಹಿಂಬಾಲಿಸುವದರಲ್ಲಿ ಬಂಟನೆನ್ನುವಂತೆ ಉಪನೇತ್ರಗಳನ್ನು ಧರಿಸಿದ್ದಾನೆ ).

ಮನೋರಮಾ:—ಇದೋ, ಮೋಹಿನೀ, ಕಾಮುರಾಯನು ಬರುವನಂತೆ. ಅವನನ್ನು ಕರೆದುಕೊಂಡು ಹೋಗು.

ತಿಮ್ಮಾಜಿ:— (ಆಶ್ಚರ್ಯದಿಂದ) ಕಾಮುರಾಯ ! (ತಿರುಗಿ ನಿಂತು) ಎಲ್ಲಿಯ ಕಾಮುರಾಯನಿವ !

ಮನೋರಮಾ:—(ನಗುತ್ತ) ಮುರೆಯುವವರಿಗೆ ಮಕ್ಕಳ ಪರಿವೆ ಕೂಡ ಇಲ್ಲ.

ತಿಮ್ಮಾಜಿ:— (ಮಗನಿಗೆ ಸಿಟ್ಟಿನಿಂದ) ಆಲ್ಲೋ, ಜನರಿಗೆಲ್ಲ ನಿನ್ನ ಹೆಸರು ಕಾಮುರಾಯನೆಂದು ಹೇಳುವಿಯೇನೊ ? ಕಾಮಾಚಾರ್ಯ ನೀನು.

ವಿದ್ಯಾಧರ:— ಅವನದೇನು ತಪ್ಪು ? ನೀವು ತಿಮ್ಮಾಜಿರಾವ ಎಂದು ಕೊಳ್ಳುವಿರಿ.

ತಿಮ್ಮಾಜಿ:— ನನ್ನ ಮಾತು ಬೇರೆ. ನನ್ನ ಪೂರ್ವಾಶ್ರಮದ ಹೆಸರು ತಿಮ್ಮಣ್ಣಾಚಾರ್ಯ ಎಂದು ಇದ್ದಿತು. ತಿಳಿಯ ಹತ್ತಿದ ಮೇಲೆ ಕಡೆಯ ಆಚಾರ್ಯವನ್ನು ತೆಗೆದು ಬಿಟ್ಟೆ. (ಮಗನಿಗೆ) ಬುದ್ಧಿ ಬರುವವರೆಗೆ ನೀನು "**ಕಾ—ಮಾ—ಚಾ—ರ್ಯ**" ತಿಳಿಯಿತೇನೊ ?

ಮನೋರಮಾ:—ಸಾಕು ನಿಮ್ಮ ಬುದ್ಧಿ. ಅವರಿಬ್ಬರನ್ನು ಸಭೆಗೆ ಕರೆದು ಕೊಂಡು ಹೋಗಿರಿ.

ಮೋಹಿನಿ:— (ಕಾಮಿಯ ಕೈಹಿಡಿದು) ನಡೆ ಹೋಗುವಾ. ಮಾನಪತ್ರ ಎಂದರೆ ಏನು ಗೊತ್ತಿದೆ ಇಲ್ಲೊ ನಿನಗೆ ?

ಕಾಮಿ:— ಓಹೊ, (ಎಂದು ಜಡೆಯನ್ನು ರಭಸದಿಂದ ಹೊಯ್ದಾಡಿಸುವನು)

ಮೋಹಿನಿ:— ಅಂದರೆ ಇದು ಇಲ್ಲೇ ಇರಲಿ. (ಎಂದು ಕೈಯೊಳಗಿನ ಮಾನ ಪತ್ರದ ಪ್ರತಿಯನ್ನು ಚಲ್ಲುವಳು.)

ಕಾಮಿ:— ಮೋಹಿನಿ, ಎಂಥ ಹೂಬಿಸಿಲು ಬಿದ್ದಿದೆ ಹೊರಗೆ! ಸಭೆಯು ಬಹಳೇ ರಮ್ಯವಾಗಿ ಕಾಣುತ್ತಿರಬಹುದು! (ಇಬ್ಬರೂ ಹೋಗುವರು)

ತಿಮ್ಮಾಜಿ:— ಹೊತ್ತಾಗುವ ಲಕ್ಷಣವಿದ್ದರೆ ಅವರನ್ನು ಬೇಗ ಕರೆದು ಕೊಂಡು ಬರುವೆ. (ಹೋಗುವನು. ವಿದ್ಯಾಧರನು ಕೋಣೆಯೊಳಗೆ ಹೋಗುವನು. ಮನೋರಮೆಯು ಉಸುರ್ಗರೆದು ಒಂದು ಕುರ್ಚಿಯಲ್ಲಿ ಕುಳಿತುಕೊಳ್ಳುವಳು. ವಿದ್ಯಾಧರನು ತನ್ನ ಕೈಬಡಿಗೆಯನ್ನೂ ಹ್ಯಾಟನ್ನೂ ಹಿಡಿದುಕೊಂಡು ಹೊರಗೆ ಬರುವನು. ಮನೋರಮೆಯು ವೃತ್ತಪತ್ರ ಓದುವವಳಂತೆ ನಟಿಸುವಳು. ವಿದ್ಯಾಧರನು ಹೊರಗೆ ಹೊರಡುವನು. ಕೆಳಗೆ ಬಿದ್ದ ಮಾನಪತ್ರದ ಪ್ರತಿಯನ್ನು ಎತ್ತಿ ತೆಗೆದುಕೊಂಡು ಅದನ್ನು ಓದುವನು. ಕೆಲಹೊತ್ತು ನಿಂತು ಕೊಂಡು ಮನೋರಮೆಯ ಕಡೆಗೆ ತಿರುಗಿ)

ವಿದ್ಯಾಧರ:— ನಾನೂ ಸಭೆಗೆ ಹೋಗುವವನಿದ್ದೆ.

ಮನೋರಮಾ:—ಹೋಗುವದಿತ್ತು. ನಿನಗೇನು ಅಂತಹ ಜೀವ ಹೋಗುವ ರೋಗಿಯು ಗಂಟು ಬಿದ್ದಿದೆ.

ವಿದ್ಯಾಧರ:— ಗಂಟುಬಿದ್ದ ರೋಗಿಯಿಂದ ನನ್ನದೇ ಜೀವ ಹೋಗುವದಿದೆ. (ನಕ್ಕು) ಮನೋರಮಾ, ರಾಯರು ಹೇಳಿದ್ದು ಸುಳ್ಳಲ್ಲ. ನಿನಗೆ ಮನಸಿನ ಬೇನೆಯಾಗಿದೆ.

ಮನೋರಮಾ:— ನನ್ನ ಬೇನೆಗೆ ನಿನ್ನ ಮನಸಾಗಿದೆ.

ವಿದ್ಯಾಧರ:— ನಿನ್ನ ಮನಸಿಗೆ ನಾನೇ ಬೇನೆಯಾಗಿದ್ದರೆ, ಇದೊ, ಹೊರಟೆ.

ಮನೋರಮಾ:— (ಅವನ ಕಡೆಗೆ ನೋಡದೆ) ಹೋಗುವವರು ಯಾವಾಗಲೊ ಹೋಗಿ ಬಿಡುತ್ತಿದ್ದರು ತಮ್ಮ ಕೆಲಸ ಮುಗಿದ ಕೂಡಲೆ. ಹೀಗೆ ಹಾಳು ಹರಟೆ—

ವಿದ್ಯಾಧರ:— (ಆಶ್ಚರ್ಯದಿಂದ) ಹಾಳು ಹರಟೆ! ಮನೋರಮಾ ಹರಟೆಯಿಂದ ವೇಳೆ ಕಳೆಯುವದಿದ್ದರೆ ನಿನ್ನ ಕೂಡ ಮಾತನಾಡುವ ಗೊಡವೆಗೆ ಬರುತ್ತಿದ್ದಿಲ್ಲ. ರಾಯರ ಸಲುವಾಗಿ ಬಂದೆ. ಬಂದ ಕೆಲಸ ಮಾಡಿದೆ. ಮಾಡಿದ ಕೆಲಸವನ್ನು ಒಪ್ಪಿಸಲಿಕ್ಕೆ ನಿಂತಿರುವೆ.

ಮನೋರಮಾ:—(ಸಂಶಯದಿಂದ) ಯಾರಿಗೆ ಒಪ್ಪಿಸುವದು? ಯಾವ ಕೆಲಸ?

ವಿದ್ಯಾಧರ:— ನಿನಗೆ ಒಪ್ಪಿಸುವದು, ನನ್ನ ಕೆಲಸ—ಅಂದರೆ ಡಾಕ್ತರನಾದ ನನ್ನ ಕೆಲಸ. ಮನೋರಮಾ, ರಾಯರ ಪ್ರಕೃತಿಯ ವಿಷಯವಾಗಿ ಬಹಳೇ ಎಚ್ಚರದಿಂದಿರಬೇಕಾಗುವದು.

ಮನೋರಮಾ:— ಅದನ್ನು ನನ್ನ ಮುಂದೆ ಹೇಳುವೆಯಾ?

ವಿದ್ಯಾಧರ:— ಶರೀರದ ಸ್ವಾಸ್ಥ್ಯ ಮನಸಿನ ಮೇಲೆ, ರಾಯರ ಮನಸು ನಿನ್ನ ಮೇಲೆ.

ಮನೋರಮಾ:—(ಸಿಟ್ಟಿನಿಂದ) ನಮ್ಮ ಮನೆಯ ಹರಟೆ ಬೇಡ; ಅವರಿಗೆ ಏನಾಗಿದೆ?

ವಿದ್ಯಾಧರ:— (ತಲೆ ಅಲ್ಲಾಡಿಸುತ್ತ) ಏನೂ ಇಲ್ಲ.

ಮನೋರಮಾ:—(ಎದ್ದು) ಸುಳ್ಳು, ವಿದ್ಯಾಧರಾ ಬಚ್ಚಿಡುವಿ ನನ್ನಿಂದ (ಕಳಕಳಿಯಿಂದ) ನಿನಗೆ ಕೈ ಮುಗಿಯುವೆನು.

ವಿದ್ಯಾಧರ:— (ಮೊದಲಿನಂತೆ) ಏನೂ ಇಲ್ಲ.

ಮನೋರಮಾ:—(ಸಿಟ್ಟಿನಿಂದ) ಕಟುಕರು ನೀವು ಡಾಕ್ತರರೆಲ್ಲ. (ಕಣ್ಣೀರು

ತಂದು) ಇಲ್ಲ, ವಿದ್ಯಾಧರಾ ಏನೋ ಬಚ್ಚಿಡುವಿ. ( ತಿರಸ್ಕಾರದಿಂದ ) ಇದನ್ನೇ ಒಪ್ಪಿಸುವವನಿದ್ದೆಯಲ್ಲವೇ? ಒಪ್ಪಿಸಿದಿ; ಹೋಗಿನ್ನು.

ವಿದ್ಯಾಧರ:— ನಾನು ಯಾವಾಗಲೋ ಹೋಗುವವನಿದ್ದೆ, ಮೊದಲು ನಿನಗೆ ಒಪ್ಪಿಸಿ ಬಿಡಬೇಕೆಂದರೂ ಕೊನೆಗೆ ನಿನಗೆ ಹೇಳಿ ಲಾಭವಿಲ್ಲೆಂದು ನಿಶ್ಚಯಿಸಿಕೊಂಡೇ ಹೊರಟಿದ್ದೆ. ಅದಕ್ಕಾಗಿಯೇ ಸಭೆಗೆ ಹೊರಟೆ. ಆದರೆ—

ಮನೋರಮಾ:—( ಸಿಟ್ಟಿನಿಂದ ) ಆದರೆ? ಆದರೆ ನಿನಗಿಲ್ಲಿ ತಡೆದವರಾರು ?

ವಿದ್ಯಾಧರ:— ಸಿಟ್ಟು ತಡೆಯುವದನ್ನು ಬಿಟ್ಟು ಯಾರೋ ಮರೆತು ನನ್ನನ್ನು ತಡೆದರು. ( ಮುಂದೆ ಬಂದು ಸಮಾಧಾನದಿಂದ) ಮನೋರಮಾ, ನನ್ನ ಜಾಗೆಯಲ್ಲಿ ಕಾಮಿಯನ್ನು ಕಳುಹಿಸಿ ಕೊಡಲಿಲ್ಲವೆ ಸಭೆಗೆ ನೀನು? ಮೋಹಿನಿಯು ನನ್ನ ಸಲುವಾಗಿ ಕಾದಿಟ್ಟಿದ್ದಿಲ್ಲವೆ ಆ ಜಾಗೆಯನ್ನು ? ನನಗೆ ಹೋಗಲು ಅವಸರ ಕೊಡದೆ, ತಿಮ್ಮಾಜಿಯನ್ನು ಕೂಡ ಹೊರಗೆ ಅಟ್ಟಲಿಲ್ಲವೆ ನೀನು ?

ಮನೋರಮಾ:—( ಸಿಟ್ಟಿನಿಂದ ) ನಿನ್ನ ಕೂಡ ಮಾತನಾಡುವದಕ್ಕೆ ಇಷ್ಟೊಂದು ಅಬ್ಬರ ಬೇಡ ನನಗೆ ( ಮತ್ತೆ ಕುಳಿತುಕೊಳ್ಳುವಳು ).

ವಿದ್ಯಾಧರ:— ಅಬ್ಬರವೋ ಉತ್ಸಾಹವೊ ನನಗೆ ತಿಳಿಯದು. ಮನೋರಮೆಗೆ ನನ್ನ ಕೂಡ ರಹಸ್ಯವಾಗಿ—

ಮನೋರಮಾ:—( ಒಮ್ಮೆಲೆ ಎದ್ದು ಸಿಟ್ಟಿನಿಂದ) ಸಾಕು ಮಾಡು ನಿನ್ನ ರಹಸ್ಯ. ಅವರ ಪ್ರಕೃತಿಯ ಸಲುವಾಗಿ ಕೇಳಬೇಕೆಂದರೆ ಅದನ್ನೇನು ಮಾಳಿಗೆಯಿಂದ ಕೂಗಿ ಕೇಳಲಿಯಾ?

ವಿದ್ಯಾಧರ:— (ಆಶ್ಚರ್ಯ ತೋರಿಸಿ) ಇಷ್ಟೊಂದು ಸಿಟ್ಟು ಯಾಕೆ ಅದಕ್ಕೆ? ನನ್ನ ಮನಸ್ಸಿನ ರಹಸ್ಯವೂ ಅದೇ. (ಕ್ರೂರ ನಗೆಯಿಂದ) ನಾನು ಡಾಕ್ಟರನಿರುವೆ. ಮರೆಯಬೇಡ. ರೋಗಿಯ ರಹಸ್ಯವನ್ನು ಕಾದಿಡುವ—

ಮನೋರಮಾಃ— (ಅಣಕಿನಿಂದ) ಕಾದಿಡುವಂಥ ರಹಸ್ಯವೇನೂ ನಮ್ಮಲ್ಲಿಲ್ಲ.

ವಿದ್ಯಾಧರಃ— ಕಾದಿಟ್ಟ ರಹಸ್ಯವೆಂದೇ ನಿನಗೆ ತಿಳಿದಿಲ್ಲ.

ಮನೋರಮಾಃ— (ಸಿಟ್ಟಿನಿಂದ) ಹೇಳುವದಿದ್ದರೆ ಹೇಳು, ಇಲ್ಲವಾದರೆ-—

ವಿದ್ಯಾಧರಃ— (ನಡುವೆಯೆ) ಹೇಳುವದೇ ಇದೆ. ಹೇಳಲೇಬೇಕಾಗಿದೆ. (ನಗುತ್ತ) ಆದರೆ ಅದಕ್ಕೆ ಮುಂಚಿತವಾಗಿ ಕೇಳುವ ಯೋಗ್ಯತೆ ನಿನ್ನಲ್ಲಿ ಬರುವಂತೆ ಔಷಧ ಕೊಡಬೇಕಾಗಿದೆ.

ಮನೋರಮಾಃ— (ತಿರಸ್ಕಾರದಿಂದ) ನನಗೇನಾಗಿದೆ ನಿನ್ನಂತಹನ ಔಷಧ ಕುಡಿಯಲಿಕ್ಕೆ ?

ವಿದ್ಯಾಧರಃ— ರಾಯರೇ ಹೇಳಿದರು. ಮನೋರಮೆಯ ಮನಸ್ಸಿಗೆ ಔಷಧ ಬೇಕಾಗಿದೆ ಎಂದು. ನಡೆ ನನ್ನ ಕೂಡ ತಿರುಗಾಡಲು ನಡೆ, ನಿನಗೆ ಎಲ್ಲ ಹೇಳುವೆ. ಬಯಲ ಹವೆಯಲ್ಲಿ ವಿಷವೂ ಕೂಡ ಪಚನವಾಗುವದು.

ಮನೋರಮಾಃ— ನಿನಗೆ ಮಾತ್ರ ವಿಷದ ಅಜೀರ್ಣವಾದಂತೆ ಬಾಯಿಂದ ಉಸಿರಹತ್ತಿರುವಿ.

ವಿದ್ಯಾಧರಃ— (ಅವಳನ್ನು ಕೆಲ ಹೊತ್ತು ದಿಟ್ಟಿಸಿ ನೋಡಿ, ಗಂಭೀರವಾಗಿ) ಹೆಚ್ಚಿಗೆ ಮಾತನಾಡಲು ನನಗೆ ಯೋಗ್ಯತೆಯೂ ಇಲ್ಲ, ಅವಸರವೂ ಇಲ್ಲ; ಇಷ್ಟೇ ಹೇಳುವೆ, ನಿಮ್ಮ ಮನೆತನದ ಮಾನ, ಮರ್ಯಾದೆ, ಸಂಪತ್ತು ಉಳಿಯಬೇಕಾಗಿದ್ದರೆ ನನ್ನ

ಮಾತನ್ನು ನೀನು ಕೇಳಲೇಬೇಕಾಗುವದು. ಮನೆಯ ಹಿಂದಿನ ತೋಟದಲ್ಲಿರುವೆ. ಅವಶ್ಯವಿದ್ದರೆ ಬರಬಹುದು. ( ಹಲ್ಲು ಕಿರಿದು ಹೋಗುವನು ).

ಮನೋರಮಾಃ— ( ದಂಗುಬಡೆದವಳಂತೆ ನಿಂತು ಗಾಬರಿಯಾಗಿ ) ಮಾನ! ಮರ್ಯಾದೆ! ಸಂಪತ್ತು! ಒಬ್ಬ ಯಃಕಶ್ಚಿತ ಡಾಕ್ತರನಿಂದ ಉಳಿಯಬೇಕಾಗುವದೆ? ಇದೇನು ರೋಗಿಯ ಬೇನೆಯೆ, ಏನು ಡಾಕ್ತರನ ಬೇನೆಯೆ? ಅಮ್ಮಯ್ಯಾ, ನನಗೆ ಬರಬಾರದಿತ್ತೆ ಎಂತಹದಾದರೊಂದು ಬೇನೆ? ( ಎಂದು ಕಣ್ಣು ಕತ್ತಲೆಗಟ್ಟಿ ತಲೆ ಹಿಡಿದುಕೊಂಡು ಕುಳಿತು ಕೊಳ್ಳುವಳು ).



# ಪ್ರವೇಶ ೨

( ಒಂದು ಒಂದೂವರೆ ತಾಸು ರಾತ್ರಿಯಾಗಿರಬಹುದು. ಈಗಾಗಲೇ ಕತ್ತಲೆ ಯಾಗಿದೆ. ಕಗ್ಗತ್ತಲೆಯ ರಾತ್ರಿಯನ್ನು ಕವಿಗಳೆಷ್ಟೋ ಜನ ವಿಧವಿಧವಾಗಿ ಬಣ್ಣಿಸಿರುವರು ! ನಾವೇನು ಕವಿಯಲ್ಲ, ಕವಿಯೆನ್ನಿಸಿಕೊಳ್ಳುವ ಹೌಸವೂ ನಮಗಿಲ್ಲ. ಆದರೆ ವಿಚಾರಗಳ ಭರವನ್ನು ತಡೆಯುವದು ಕವಿಗಳಲ್ಲದ ನಮ್ಮಂತಹ ಸಾಮಾನ್ಯ ಜನರಿಗೆ ದುಃಸಾಧ್ಯವೆಂದು ಬೇರೆ ಹೇಳಬೇಕೆ? ಹರಿಹರರಾಯನ ಮನೆಯ ಹಿಂದೆ ಸದ್ಯಕ್ಕೆ ಹಬ್ಬಿರುವ ಕತ್ತಲೆಯನ್ನು 'ನೋಡಿ ಯಾರಿಗಾದರೂ ಒಂದೇ ಒಂದು ವಿಚಾರ ಬರಬಹುದು. ಕತ್ತಲೆಯ ರಾತ್ರಿಯೆಂದರೆ ತನ್ನ ಸೌಂದರ್ಯದ ಸೊಕ್ಕುಳ್ಳ ಸುಂದರಿಯಂತೆ; ತನ್ನ ಹೊರತು ಬೇರೆ ಯಾರೂ ಕಾಣಿಸಬಾರದೆಂದು ಅಸೂಯೆ ಇಬ್ಬರಿಗೂ. ಕಾಮಿಯ ಮನಸ್ಸಿನಲ್ಲಿಯಾದರೂ ಈ ವಿಚಾರವೇ ಇದ್ದಂತೆ ತೋರುವದು. ಅವನ ವಯಸ್ಸನ್ನು ಹಿಂದೆ ಹೇಳಲಿಲ್ಲವೆ? ಪ್ರೇಕ್ಷಕರೇ, ಆ ವಯಸ್ಸಿನಲ್ಲಿದ್ದಾಗ ನಾವು ನೀವು ಕೂಡ ಸ್ವತಃಕ್ಕೆ ಕವಿಯೆಂಬ ಬಿರುದನ್ನು ಕಲ್ಪಿಸಿಕೊಂಡಿಲ್ಲವೆ? ಸದ್ಯಕ್ಕೆ ಕಾಮಿಯು ತನ್ನನ್ನು ಕವಿಯಂದಷ್ಟೇ ಅಲ್ಲ, ನಾಯಕನೆಂದೂ ತಿಳಿದುಕೊಂಡಿರುವನು. ಕಾರಣವನ್ನು ಒಡೆದು ಹೇಳಬೇಕೆ? ಅವನ ಕೂಡ ಮೋಹಿನಿಯು ಇದ್ದಾಳೆ. ಇಬ್ಬರೂ-ಇಬ್ಬರೇ ಸಭೆಯಿಂದ ಕತ್ತಲಾದ ಮೇಲೆ ತಿರುಗಿಹೊರಟರು. ದಾರಿ ತಪ್ಪಿತು. ಕತ್ತಲೆಯು ಹೆಚ್ಚು ಕಪ್ಪಾಯಿತು. ದಾರಿಯು ಹೆಚ್ಚು ದೂರಾಯಿತು. ಮೋಹಿನಿಗೆ ಹೆದರಿಕೆ; ಕಾಮಿಗೆ ಎದೆಗಾರಿಕೆ. ಸಂಕಟದಲ್ಲಿ ಸಿಲುಕಿದ ನಾಯಕನು ತಾನಲ್ಲವೆ? ಈ ಎದೆಗಾರಿಕೆಯಲ್ಲಿ ಕವಿತ್ವದ ಮಿಂಚು. ಅಂತಹ ವಯಸ್ಸಿನಲ್ಲಿ, ಅಂತಹ ವೇಳೆಯಲ್ಲಿ, ಅಂತಹ ಪ್ರಸಂಗದಲ್ಲಿ, ಅಂತಹ ಹುಡುಗೆಯು ಹತ್ತಿರದಲ್ಲಿದ್ದರೆ ಯಾರಿಗೆ ತಾನೆ ಕವಿತ್ವದ ದೆವ್ವ ಬಡೆದುಕೊಳ್ಳಲಿಕ್ಕಿಲ್ಲ? ಆದರೆ ಪಾಪ! ಮೋಹಿನಿಯ ಸ್ಥಿತಿ ಏನಾಗಿದೆಯೆಂಬುದು ಅವಳ ಮಾತಿನಿಂದಲೇ ಕಂಡು ಬರುವದು).

ಮೋಹಿನಿ:— ( ಮೆಲು ದನಿಯಲ್ಲಿ ) ಕಾಮೀ, ಕಾಮೀ, ಎಲ್ಲಿ ಬಂದೆವೋ ಅಡವಿಯಲ್ಲಿ! ನನ್ನ ಬಿಡಬೇಡ ಕಾಮೀ.

:— ( ಗಂಭೀರವಾಗಿ ) ನಿನ್ನನ್ನು ಬಿಡುವುದೆ! ಇಂತಹ ಕಗ್ಗತ್ತಲೆಯಲ್ಲಿ! ಇಂತಹ ಕಾಡು ಅಡವಿಯಲ್ಲಿ! ನಾನೇನು ರಾಮ

ಸಲ್ಲ, ಹೆಂಗಸೊಬ್ಬಳನ್ನೇ ಕಾಡಿಗೆ ಕಳುಹಿಸಲಿಕ್ಕೆ. ಜನರು ಬೇಕಾದ್ದನ್ನು ಆಡಿಕೊಳ್ಳಲಿ. (ಆವೇಶದಿಂದ) ಮೋಹಿನೀ, ನೋಡಿದೆಯಾ ಕಾಡಿಗೆಯಿಂದ ಮುಚ್ಚಿ ಮುಸುಕಿದ ಬ್ರಾಹ್ಮಣರ ಅಡಿಗೆಯ ಮನೆಯಂತೆ ಕತ್ತಲೆ ಹೇಗೆ ಕವಿದಿದೆ?

ಮೋಹಿನಿ:— (ಅವನ ಹತ್ತರ ಬಂದು) ಬೇಡಪ್ಪಾ ನನಗೆ ಹೆದರಿಕೆ ಬರುವದು.

ಕಾಮಿ:— (ಆಶ್ಚರ್ಯದಿಂದ) ಬ್ರಾಹ್ಮಣರ ಅಡಿಗೆಯ ಮನೆಗೆ ಇಷ್ಟೊಂದು ಹೆದರುವೆಯಾ?

ಮೋಹಿನಿ:— ಇಲ್ಲ, ಕತ್ತಲೆಗೆ ಹೆದರುವೆ. ಕಣ್ಣು ಮುಂದೆ ಏನೇನೋ ಕಾಣಿಸುವದು.

ಕಾಮಿ:— ಛೀ ಹುಚ್ಚೀ, ಕತ್ತಲೆಯಲ್ಲಿ ಕಣ್ಣು ತೆರೆಯುವರೆ ಯಾರಾದರೂ? ನೋಡು, ಕಣ್ಣಿನ ಉಪಯೋಗ ನೋಡುವದಕ್ಕೆ; ಕಾಣಿಸದಿದ್ದರೆ ಸುಮ್ಮ ಸುಮ್ಮನೆ ಯಾಕೆ ಕಣ್ಣು ತೆರೆಯಬೇಕು? ನನ್ನಂತೆ ಗಟ್ಟಿಯಾಗಿ ಕಣ್ಣು ಮುಚ್ಚು, ಅಂದರೆ ಹೆದರಿಕೆಗೆ ಬರುವ ಧೈರ್ಯವೇ ಆಗುವದಿಲ್ಲ.

ಮೋಹಿನಿ:— (ಹೆದರಿಕೆಯಿಂದ) ನಿನಗೆ ಕೈ ಮುಗಿಯುವೆ ನನ್ನ ಕೈ ಬಿಡಬೇಡ.

ಕಾಮಿ:— ಹೀಗೆ ಮೇಲಿಂದ ಮೇಲೆ ಕೈ ಮುಗಿಯಹತ್ತಿದೆಯೆಂದರೆ ನೀನೇ ನನ್ನ ಕೈ ಬಿಡುವಿ. (ಕಳಕಳಿಯಿಂದ) ಮೋಹಿನಿ, ನಿನ್ನ ಕೈ ಬಿಡುವದೆ? ಸಪ್ತಸಮುದ್ರಗಳೆಲ್ಲ ಕಪ್ಪಾಗಿ ನಮ್ಮನ್ನು ಮುಸುಕಲಿ, ಪ್ರಳಯ ಕಾಲದ ಮೇ
ಗಡಗಡ ಗದ್ದರಿಸುತ್ತ ಆವರಿಸಲಿ—

ಮೋಹಿನಿ:— ನೀನು ಬಹಳ ಮಾತಾಡಬೇಡಪ್ಪಾ; ಎಲ್ಲಿಂದೋ ಕೇಳಿಸಿಧಾಂಗ ಆಗಿ ನನಗೆ ಹೆದರಿಕೆಯು ಬರುವದು. (ಸಂಶಯದಿಂದ) ಕಾಮೀ, ಎಲ್ಲಿಗೆ ಬಂದಿರುವೆವೊ?

ಕಾಮಿ:— (ಹೆಮ್ಮೆಯಿಂದ) ಎಲ್ಲಿಯೇನು? ದಟ್ಟಡವಿಯಲ್ಲಿ ಹಾದಿ ತಪ್ಪಿ ಬಂದಿರುವೆವು. ಬರಲಿ, ಬಂದದ್ದಕ್ಕೆ ಬಂಟ ನಾನಿರುವೆ; ಹುಲಿ ಸಿಂಹಗಳು ಬರಲಿ, ಕ್ರೂರ ಕರಡಿಗಳು ಬರಲಿ—

ಮೋಹಿನಿ:— (ಚೀರಿ) ಬೇಡೋ ಕಾಮೀ, ಬೇಡ, ನನಗೆ ಎಲ್ಲಿಂದಲೊ ಗುಡುಗು ಕೇಳಿಸಿಧಾಂಗ ಆಯ್ತು.

ಕಾಮಿ:— (ತಿರಸ್ಕಾರದಿಂದ) ಛೀ, ಹುಲಿ ಸಿಂಹಗಳಿಗೆ ಹೆದರುವೆಯಾ? ಬರಲಿ, ಕುರಿಮರಿಗಳಂತೆ ಕಂಕುಳದಲ್ಲಿಟ್ಟು ಅವುಗಳ ಕಣ್ಣಿನ ಕಂದೀಲು ಮಾಡಿ ಹಾದಿ ತೋರಿಸುವೆ ಬಾ. (ಎಂದು ಅವಳ ಕೈ ಹಿಡಿದು ಸಾಗುವನು).

ಮೋಹಿನಿ:— (ಉಸುರ್ಗರೆದು) ಈಗ ನನಗೆ ಧೈರ್ಯ ಬಂದಿತು ನೋಡು ನೀನು ಕೈ ಹಿಡಿದ ಮೇಲೆ.

ಕಾಮಿ:— (ನಿಂತು ಕನಿಕರದಿಂದ) ಮೋಹಿನೀ, ಧೈರ್ಯಕ್ಕೆ ಬರಗೊಡಬೇಡ, ಹೆದರಿಕೆ ಹಾಕು. ನೀನು ಹೆದರುವದರಲ್ಲಿಯೇ ಹೆಚ್ಚು ಸೊಗಸಿದೆ. ಹೆದರಿದೆಯೆಂದರೆ ಬಿರುಗಾಳಿಯ ಬಡೆತದಲ್ಲಿ ಸಿಕ್ಕ ಬಳ್ಳಿಯಂತೆ ನಿನ್ನ ಮೈ ನಡುಗುವದು. ಚಿಗರಿಯ ಕಣ್ಣುಗಳಂತೆ ನಿನ್ನ ಕಮನೀಯ ಕಣ್ಣುಗಳು ಅರಳುವವು.

ಮೋಹಿನಿ:— (ಆಶ್ಚರ್ಯದಿಂದ) ಕತ್ತಲೆಯೊಳಗೆ ಹ್ಯಾಗ ಕಾಣಿಸತಪ್ಪಾ ಇದೆಲ್ಲಾ?

ಕಾಮಿ:— (ಮೊದಲಿನಂತೆ) ಕಾಣಿಸುವ ಕಾರಣವೇ ಇಲ್ಲ. ಭಯ

ಭೀತಳಾದ ಇಲ್ಲವೆ–ಚಕಿತಳಾದ ಕಾಮಿನಿಯ ಸ್ಥಿತಿಯು ಹೀಗಾಗಲೇಬೇಕೆಂದು, ಕವಿ ಸಮಯವಿದೆ. ಕಾವ್ಯದಲ್ಲಿ ಬರೆದಿದೆ.

ಮೋಹಿನಿ:— ಅದಿರಲಿ ಕಾಮೀ, ಕತ್ತಲೆಯಲ್ಲಿ ಸಿಕ್ಕರೆ ಏನು ಮಾಡ ಬೇಕು ಹೇಳಿದೆಯೇನೋ ಕಾವ್ಯದೊಳಗೆ?

ಕಾಮಿ:— ( ತಿರಸ್ಕಾರದಿಂದ ) ಛೇ, ಇನ್ನೂ ನಮ್ಮ ಸ್ಥಿತಿಯು ಕಾವ್ಯದ ಸ್ಥಿತಿಗೆ ಬಂದಿಲ್ಲ. ಇಲ್ಲದಿದ್ದರೆ ಹೇಳಿಬಿಡುತ್ತಿದ್ದೆ ಯುಕ್ತಿಯನ್ನು.

ಮೋಹಿನಿ:— ( ನಮ್ರ ಭಾವದಿಂದ ) ದೇವಾ, ನಮ್ಮ ಅವಸ್ಥೆಯು ಆದಷ್ಟು ಬೇಗ ಕಾವ್ಯದ ಸ್ಥಿತಿಗೆ ಬರಲಿ ಅಂದರೆ ನಿನಗೆ-

ಕಾಮಿ:— ಛೇ, ಇಷ್ಟಕ್ಕೆ ಯಾಕೆ ದೇವರು ? ನಾನು ಹೇಳುವೆ. ಮೊದಲು ನಾ ನಿನ್ನ ಕೈ ಬಿಡಬೇಕು. ನೀನೊಂದು ಕಡೆ, ನಾನೊಂದು ಕಡೆ ಆಗಬೇಕು. ಕೋಮಲೆಯಾದ ನೀನು ಕಲ್ಲು ಮುಳ್ಳುಗಳನ್ನು ಸಹಿಸದೆ ಹಲಬುತ್ತ ಸಾಗು ವಾಗ್ಗೆ ದಿಗ್ಗಜಗಳ ಸೊಂಡೆಯನ್ನು ಮುರಿಯುವನೊ ಏನೋ ಎಂಬಂತೆ ನಾನೊಂದು ಕಡೆ ಸಾಗಬೇಕು. ಆಗ್ಗೆ ನಿನ್ನ ಮೈಮೇಲೆ ಒಂದು ಕ್ರೂರ ಹುಲಿಯು ಆವೇಶದಿಂದ—

ಮೋಹಿನಿ:— ಬೇಡಪ್ಪಾ ನಿನ್ನ ಕಾವ್ಯ; ನನಗೆ ಮನೆಮುಟ್ಟಿಸು ಬೇಗನೆ.

ಕಾಮಿ:— ( ಬೇಜಾರದಿಂದ ) ನಿನಗೆ ರಸವೇ ತಿಳಿಯಲಿಲ್ಲ. ನಾನೂ ನೀನೂ ಅಗಲಿರುವೆವು. ಹುಲಿಯು ಬಾರದ ಹೊರತು ನನ್ನ ನಿನ್ನ ಭೆಟ್ಟಿಯಾಗುವದು ಹೇಗೆ?

ಮೋಹಿನಿ:— ( ಹೆದರಿಕೆಯಿಂದ ) ಏನ ಬೇಡಪ್ಪಾ ನಿನ್ನ ಹುಲಿ. ನಿನ್ನ ಹುಲಿ ಬರುವದರೊಳಗೆ ಮನೆಮುಂದಿಯು ಭೆಟ್ಟಿಯು

ಮಾಡಿಸು ನನಗೆ. ( ಕೆಮ್ಮಿದ ಸಪ್ಪಳವು ಕೇಳಬರುವದು. ಹೆದರಿ, ಅಳು ದನಿಯಿಂದ ) ಕಾಮೀ, ಬೇಗ ಮನೆ ಮುಟ್ಟಿಸೊ, ಯಾರೋ ಬಂದರು. (ಗಟ್ಟಿಯಾಗಿ ಅವನ ಕೈ ಹಿಡಿಯುವಳು).

ಕಾಮಿ:— ಬರುವರು ಯಾರು? ನಿಶಾಚರರು; ಬರಲಿ ಬೇಕಾದಷ್ಟು. ನನ್ನಂತೆ ಗಟ್ಟಿಯಾಗಿ ಕಣ್ಣು ಮುಚ್ಚಿಬಿಡು ಅಂದರೆ ಯಾವದರ ಹೆದರಿಕೆಯೂ ಇಲ್ಲ. (ಮತ್ತೆ ಕೆಮ್ಮುವ ಧ್ವನಿ ಕೇಳ ಬರುವದು. ಯಾರೋ ನಡೆದು ಬರುವಂತೆ ಸಪ್ಪಳವಾಗುವದು ).

ಮೋಹಿನಿ:— ( ಮೆಲ್ಲಗೆ ) ಕಾಮೀ, ಕಾಲ ಸಪ್ಪಳವಾಗುವದೊ !

ಕಾಮಿ:— ( ಕೊಂಚ ಹೆದರಿ, ಅದನ್ನು ತೋರಿಸಬಾರದೆಂದು ಹೆಮ್ಮೆಯಿಂದ ) ಛೇ, ಮತ್ತೆಲ್ಲಿಯ ಕಾಲ ಸಪ್ಪಳ? ಗಾಳಿಯಿಂದ ನನ್ನ ಕೈಕಾಲುಗಳೇ ಅಲೆದಾಡಹತ್ತಿವೆ. ( ಒಮ್ಮೆಲೆ ಮೋಹಿನಿ ಯನ್ನು ಹಿಂದೆ ಸರಿಸಿ ಸಣ್ಣ ದನಿಯಲ್ಲಿ ) ಸರಿ ಹಿಂದೆ, ಸರಿ ಹಿಂದೆ. ಅಬಲೆಯರನ್ನು ರಕ್ಷಿಸುವ ಭಾರವು ನನ್ನ ತಲೆಯ ಮೇಲೆ ಇದೆ. ಬರಲಿ. ಎಲಾ, ದುಷ್ಟಾ, ನಿಶಾಚರಾ,- (ಮೋಹಿನಿಗೆ) ನಿನ್ನನ್ನು ಮರೆಮಾಡಲು ನಾನು ಹಿಂದು ಸರಿಯುತ್ತಿರುವೆ, ( ಒಮ್ಮೆಲೆ ಕಳ್ಳದನಿಯಲ್ಲಿ ) ಅಗೋ ಯಾರೋ ಬಂದರು.

ಮೋಹಿನಿ:— ( ಉಸುರಿನಲ್ಲಿಯೆ ) ಅವ್ವಯ್ಯಾ ದೆವ್ವ ! ( ಎಂದು ಅವಸರದಿಂದ ಹಿಂದೆ ಸರಿಯುತ್ತ ಒಳಕ್ಕೆ ಹೋಗುವಳು. ಕಾಮಿಯು ಮರೆಯಾಗ ಬೇಕೆನ್ನುವಷ್ಟರಲ್ಲಿ ಮತ್ತೊಂದು ಬದಿಯಿಂದ " ಮನೋರಮಾ, ನಿನ್ನ ಇಚ್ಛೆ " ಎಂದು ವಿದ್ಯಾಧರನು ಮನೋರಮೆಯನ್ನು ಹಿಂಬಾ ಲಿಸಿ ಬರುವನು ).

ಕಾಮಿ:— ( ಆಶ್ಚರ್ಯದಿಂದ ) ಮನೋರಮಾ ! ವಿದ್ಯಾಧರನ ದನಿ ಯಲ್ಲವೆ ?

ಮನೋರಮಾ:—( ದೈನ್ಯದಿಂದ ) ವಿದ್ಯಾಧರಾ, ಆ ರೋಗದ ಹೆಸರನ್ನಾದರೂ ಹೇಳು.

ವಿದ್ಯಾಧರ:— ರೋಗವು ಹೆಸರಾದದ್ದು, ಅದರ ಹೆಸರು ಮಾತ್ರ ಹೇಳು ವಂತಹುದಲ್ಲ.

ಮನೋರಮಾ:—( ಮೊದಲಿನಂತೆ ) ವಿದ್ಯಾಧರಾ, ನನ್ನ ಮುಂದೆ ಹೇಳಲು ಕೂಡ ಬರುವದಿಲ್ಲವೆ ?

ವಿದ್ಯಾಧರ:— ( ಆಶ್ಚರ್ಯದಿಂದ ) ನಿನ್ನ ಮುಂದೆ ! ಮನೋರಮಾ, ಎಷ್ಟೋ ಜನರ ಮಾನಮರ್ಯಾದೆಗಳು ನಮ್ಮ ಕೈಯು ಲ್ಲಿದ್ದುದರಿಂದ, ನಮಗೆ—ಡಾಕ್ಟರರಿಗೆ—ಮಾನಮರ್ಯಾದೆ ಕಾಯ್ದುಕೊಳ್ಳುವದೊಂದು ಚಟವಿದೆ. ಹೆಂಗಸರ ಮುಂದೆ ಯಾವದನ್ನು ಹೇಳಬೇಕು, ಯಾವದನ್ನು ಹೇಳಬಾರದು ಇದರ ಎಚ್ಚರವಿದೆ ನನಗೆ. ನಿನಗೂ ಎಚ್ಚರವಿರಬೇಕೆಂದು ಹೇಳುವೆ. ರೋಗಿಯಿಂದ ದೂರವಿದ್ದಷ್ಟು [illegible] ಹಿತ.

ಮನೋರಮಾ:— ವಿದ್ಯಾಧರಾ, ಕಣ್ಣು ಕತ್ತಲೆಗಟ್ಟುವಂತಹ ಮಾತು ಹೇಳಿ ಎಚ್ಚರ ಕೊಡುವಿಯಾ ನನಗೆ ? ವಿದ್ಯಾಧರಾ, ವಿದ್ಯಾಧರಾ, ನಿಜವೆ ಇದು ? ಸುಳ್ಳು ಆಗುವಂತಿಲ್ಲವೆ ? ಸರಿಯಾಗುವಂತಿಲ್ಲವೆ ? ವಿದ್ಯಾಧರಾ, ನನ್ನ ಕಡೆ ನೋಡಿ ಯಾದರೂ ಉತ್ತರ ಕೊಡು. ಮನೆಯ ಸುಖ, ಮಕ್ಕಳ ಸುಖ........

ವಿದ್ಯಾಧರ:— ಹುಚ್ಚೀ, ನಿನ್ನ ಜೀವ ನಿನಗೆ ಬೇಕಾಗಿದ್ದರೆ, ಅವರಡೂ ಸುಖದ ಆಶೆ ಬಿಡು. ಅದಕ್ಕೆಯೇ ಎಚ್ಚರ ಕೊಡುವೆ. ಇಂತಹ ಮನೆಯಲ್ಲಿ ಮಕ್ಕಳೆಂದರೆ ಮಳೆಗಾಲದಲ್ಲಿ ಮಾವಿನ ಹಣ್ಣಿನಂತೆ.

ಮನೋರಮಾ.— ಅಯ್ಯೋ, ವಿದ್ಯಾಧರಾ, ಎಷ್ಟು ನಿರ್ದಯನಾದೆಯೊ? (ಎಂದು ಒಮ್ಮೆಲೆ ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡು ಅಳುವಳು).

ವಿದ್ಯಾಧರ:— (ಕಳಕಳಿ ತೋರಿಸುತ್ತ) ಮನೋರಮಾ, ತಪ್ಪು ಕಲ್ಪನೆ ಮಾಡಿಕೊಳ್ಳಬೇಡ. ನಿನ್ನ ಸಲುವಾಗಿ ದಯವಿಲ್ಲದಿದ್ದರೆ ನಿನಗೆ ಇದನ್ನು ಹೇಳುವಷ್ಟು ನಿರ್ದಯನಾಗುತ್ತಿದ್ದೆನೆ? (ಅವಳ ಎರಡೂ ಕೈಗಳನ್ನು ಹಿಡಿದು ಮುಖದ ಮುಸುಕನ್ನು ಬಿಚ್ಚುತ್ತ) ನೀನು ಚಿಕ್ಕವಳು, ನನಗೆ ಗೊತ್ತಿದೆ; ನಿನಗೆ ಸುಖದ ಆಶೆ ಇದೆ; ಸುಖದ ಯೋಗ್ಯತೆ ಇದೆ ಎನ್ನುವದು ನನಗೆ ಗೊತ್ತಿದೆ. ನಿನ್ನ ಸುಖಕ್ಕೆ ನನ್ನಿಂದಾದಷ್ಟು ಸಹಾಯ ಮಾಡಬೇಕೆಂದೇ—

ಮನೋರಮಾ:—(ಒಮ್ಮೆಲೆ) ಸಾಕು. (ಎಂದು ಅವನನ್ನು ಕೆಲ ಹೊತ್ತು ದಿಟ್ಟಿಸಿದಂತೆ ಮಾಡಿ) ಡಾಕ್ತರ, ನೀವು ಬಂದು ನಮ್ಮ ಮೇಲೆ ಬಹಳೇ ಉಪಕಾರ ಮಾಡಿದಿರಿ. ರೋಗವನ್ನು ಕಂಡುಹಿಡಿದದ್ದಕ್ಕೆ ಆಭಾರಿಯಿರುವೆ. ಆದರೆ—ಆದರೆ—ಇನ್ನು ಮೇಲೆ ಔಷಧವನ್ನು ಉಪಚಸೆಯವರಿಂದ ತೆಗೆದುಕೊಳ್ಳುವಂತೆ ಅವರಿಗೆ ಹೇಳುವೆ. ಬೇಕಾದಾಗ್ಗೆ, ನಿಮ್ಮನ್ನು ಕರೆಯಿಸುವೆ. (ಕೊಂಚ ಅಣಕಿಸಿಂದ) ಅಲ್ಲಿಯವರೆಗೆ ಮಾತ್ರ ಬರಬೇಡಿರಿ; ಹೋಗಿ ಬರುವೆ. (ಎಂದು ಹೊರಡುವಳು).

ವಿದ್ಯಾಧರ:— (ಚಕಿತನಾಗಿ, ಒಮ್ಮೆಲೆ ಅಧಿಕಾರಯುಕ್ತವಾಣಿಯಿಂದ) ಮನೋರಮಾ, (ಮನೋರಮೆಯು ತಿರುಗಿ ನಿಲ್ಲುವಳು) ನಿನ್ನ ಮನೆಗೆ ಬರುವಂತಹದೇನು ಹೌಸ ನನಗಿಲ್ಲ. ಜಗತ್ತಿನಲ್ಲಿ ಎಲ್ಲಿ ಹೋದರೂ ಸೂರ್ಯನಂತೆ ಡಾಕ್ತರರ ಚಿಕಿತ್ಸೆಯು

ಒಂದೇ. ಆದರೆ - ಆದರೆ ರಾಯರ ಮುಂದೆ ಮಾತ್ರ ಅವರ ರೋಗದ ವಿಷಯವಾಗಿ ಮಾತನಾಡಬೇಡ.

ಮನೋರಮಾ:—( ಸಂಶಯದಿಂದಲೂ, ಆಶ್ಚರ್ಯದಿಂದಲೂ ) ಯಾಕೆ ?

ವಿದ್ಯಾಧರ:— ( ಕೆಳಗೆ ನೋಡುತ್ತ ) ಯಾಕೆ— ಏ—ಏ—ನ್-ನೂ ಇಲ್ಲ. ಸುಮ್ಮನೆ ಹೇಳಿದೆ.

ಮನೋರಮಾ:—( ಹೆಚ್ಚಾದ ಆಶ್ಚರ್ಯದಿಂದ ) ಸುಮ್ಮನೆ! ನಾನು ಸೆರಗಿನಲ್ಲಿ ಬೆಂಕಿ ಕಟ್ಟಿಕೊಂಡಿರುವೆನೆಂದು ಸುಮ್ಮ ಸುಮ್ಮನೆ ಹೇಳಿದೆಯಾ? ನಾನು ಕೊರಳಿನಲ್ಲಿ ಕಟ್ಟಿಕೊಂಡದ್ದು ಶೂಲದ ಹಗ್ಗವೆಂದು ಸುಮ್ಮಸಮ್ಮನೆ ಹೇಳಿದೆಯಾ? ಸುಮ್ಮನೆ! ತಿಳಿಯಿತಪ್ಪಾ ಇವನ ಆಟ. ( ಮತ್ಸರದಿಂದ ) ವಿದ್ಯಾಧರಾ, ನೀಚನಿರುವಿ ನೀನು. ( ಸಿಟ್ಟು ತಡೆಯುತ್ತ ಸಮಾಧಾನದ ಸೋಗಿನಿಂದ ) ಏನೇ ಇರಲಿ, ಡಾಕ್ತರರಿಗೆ ನಾನು ಕೃತಜ್ಞಳಿರುವೆ. ನನ್ನ ಮನೆಯವರು ಕ್ಷೇಮದಿಂದಿರುವರೆಂದು ಹೇಳಿದ್ದಕ್ಕೆ ಹಣದ ತೊಟ್ಟಿಲವನ್ನು ಕಳಿಸುವೆ ನಿನಗೆ. (ಮತ್ತೆ ಸಿಟ್ಟು ತಡೆಯದೆ) ಕಪಟಿ, ಮೋಸಗಾರ—

ವಿದ್ಯಾಧರ:— ಹಾ! ತಡೆ. ಹೇಳಿದ್ದನ್ನು ತಿಳಿದುಕೊಳ್ಳುವಷ್ಟು ಬುದ್ಧಿ- ( ತಿರಸ್ಕಾರದಿಂದ ) ಬುದ್ಧಿಯ ಮಾತು ನಿನಗೇನು ? ಓದು ಬರೆಯಲ್ಲಿ ಸರಸ್ವತಿಯ ಸವತಿ ನೀನು, ಅಲ್ಲವೆ? ನಿಮ್ಮ ಯಜಮಾನರ ಸರಸ್ವತಿಯ ಸವತಿ.

ಮನೋರಮಾ:—( ಮತ್ಸರದಿಂದ ಆಶ್ಚರ್ಯ ತೋರಿಸುತ್ತ ) ಅಲ್ಲವೇನೇ ನಾನು ಸರಸ್ವತಿಯ ಸವತಿ! ಇದೋ ಸರಸಮ್ಮನ ದತ್ತಕ ಪುತ್ರನಿಗೆ ದೀರ್ಘ ನಮಸ್ಕಾರ. ( ಎಂದು ಹೊರಡುವಳು ).

ವಿದ್ಯಾಧರ:— ಹಾ! ತಡೆ. ದತ್ತಕ ಪುತ್ರನ ಹಡೆದವ್ವಾ, ಮನೋರಮಾ, ನಿನಗಿಷ್ಟೊ ಹೇಳಬೇಕಾಗಿದೆ. ಇಷ್ಟೊಂದು ನಿನಗೆ ಸತ್ಯದ ಹಟವಿದ್ದರೆ ಹೇಳುವೆ ಕೇಳು. ನಿಮ್ಮಿಬ್ಬರ ಹಿತದ ಸಲುವಾಗಿ ಹೇಳಿದೆ ನಿಮ್ಮ ಯಜಮಾನರಿಗೆ ಹೇಳಬೇಡವೆಂದು. ಸಮಾಜದಲ್ಲಿ ರಾಯರ ಜವಾಬ್ದಾರಿಯು ದೊಡ್ಡದಿಲ್ಲವೆ? ವಿಶೇಷ ಕೆಲಸಗಳಿಂದ ಅವರ ಜೀವ ಸಣ್ಣಾಗಿಲ್ಲವೆ? ಇಂತಹ ವೇಳೆಯಲ್ಲಿ ಅವರಿಗೆ ನಿಜವಿದ್ದದ್ದನ್ನು ಹೇಳಿದೆಯೆಂದರೆ ಆಕಾಶದ ಸಿಡಿಲನ್ನು ಅಂಗೈಯಲ್ಲಿ ಹಿಡಿದಂತೆ ಅಲ್ಲವೆ?

ಮನೋರಮಾ:—(ಅಣಕಿನಿಂದ) ಅಹುದಲ್ಲವೆ? ಹುಚ್ಚಿ ನಾನು, ಸರಸ್ವತಿಯ ಸವತಿ ನಾನು; ನನ್ನ ಗಂಡನ ಹಿತ ನನಗೆ ತಿಳಿಯಬಾರದೆ? ಯಮರಾಜನ ಸೋದರಳಿಯನಿಂದ ಬುದ್ಧಿ ಕಲಿಯಬೇಕೆ? (ಸುಳ್ಳು ಆದರ ತೋರಿಸುತ್ತ) ನಿಮ್ಮ ಹಿತದ ಮಾತಿಗಾಗಿ (ಒಮ್ಮೆಲೆ ತಿರಸ್ಕಾರದಿಂದ ನಗುವಳು) ಅವರ ಹಿತವಂತೆ! ನಮ್ಮ ಹಿತದ ಸಲುವಾಗಿಯಂತೆ! ಗಂಗೆಯನ್ನು ಹೊತ್ತವನಿಗೆ ಜಡೆಯ ಭಾರವಂತೆ! ಇದು ಅವರಿಗೆ ಹೇಗೆ ತಡೆಯುವದವ್ವಾ?

ವಿದ್ಯಾಧರ:— (ಒಮ್ಮೆಲೆ ಸಿಟ್ಟಿನಿಂದ) ಹೋ ಹೋ! ಹೇಗೆ ತಡೆಯುವದವ್ವಾ-ಹಾ ಹಾ ನಗುವೆಯಲ್ಲವೆ? ಅಣಕಿಸುವೆಯಲ್ಲವೆ? ಈ ಸುದ್ದಿಯನ್ನು ಬಯಲಿಗೆಳೆಯಲು ನಿನ್ನ ಹೌಸವಿದ್ದರೆ ನಾನೇ ಸಹಾಯ ಮಾಡುವೆ ನಡೆ. ಗಂಗೆಯನ್ನು ಹೊತ್ತಿಲ್ಲವೆ ನಿನ್ನ ಯಜಮಾನ? ಆ ಜಡೆಯೊಳಗಿನ ಗಂಗೆಯು ಹೇಗೆ ಕಣ್ಣಿನ ಹರಿಯಿಂದ ಹರಿದು ಹೋಗುವದು

ತೋರಿಸುವೆ. ಮನೆಮನೆಗೆ ಹೋಗುವೆ, ಡಂಗುರ ಹೊಡೆಯುವೆ; ಗುಡಿಯ ಗೋಪುರದಿಂದ ಕೂಗುವೆ; ಮೋಡಗಳ ಸಿಡಿಲಿನಿಂದ ಮಿಂಚಿಸುವೆ; ಸಮಾಜದ ಮುಂದಾಳುವೆನಿಸಿದ ಈ ಹರಿಹರರಾಯನು ಜನತೆಯನ್ನು ಅಹಲ್ಯೆಯಂತೆ ವಂಚಿಸಿದ ಇಂದ್ರನೆಂದು. ಆ ಇಂದ್ರನಂತೆಯೆ—

ಮನೋರಮಾ:—( ಒಮ್ಮೆಲೆ ನಮ್ರಳಾಗಿ ) ವಿದ್ಯಾಧರಾ, ಶಾಂತನಾಗು. ನಿನ್ನನ್ನು ಅಣಕಿಸಲಿಲ್ಲ. ನೀನು ನನ್ನನ್ನು ವಿನೋದದಿಂದ ಹೆದರಿಸಿದಂತೆ ನಾನೂ ನಿನ್ನನ್ನು ವಿನೋದದಿಂದ ಅಣಕಿಸಿದೆ. ( ಕಣ್ಣೀರು ತಂದು ) ವಿದ್ಯಾಧರಾ, ನೀನು ಹೇಳುವದು ಸುಳ್ಳಲ್ಲವೆ ? ನೀನು ಹೇಳುವದು ನಿಜವಿದೆಯೆ ? ( ಮೊಳಕಾಲೂರಿ ಅವನ ಕಾಲುಗಳ ಮೇಲೆ ಕೈಯನ್ನಿಟ್ಟು ದೀನ ಮುದ್ರೆಯಿಂದ ಅವನನ್ನು ನೋಡುತ್ತ ) ಸುಳ್ಳು, ಸುಳ್ಳು, ನಿಜವಾಗಿ ಸುಳ್ಳು ಎಂದು ಸಿಟ್ಟಿನಿಂದಾದರೂ ಹೇಳು, ವಿದ್ಯಾಧರಾ, ನಿನ್ನನ್ನು ನಗುತ್ತಾ ಅಣಕಿಸುವೆ.

ವಿದ್ಯಾಧರ:— ( ತಿರಸ್ಕಾರದಿಂದ ) ಮನಬಂದಂತೆ ನೀನು ಅಣಕಿಸು. ಮನಬಂದಂತೆ ನಾನು ನಗುವೆ. ( ಎಂದು ಬಂದ ಬದಿಯಿಂದಲೇ ತಿರುಗಿ ಹೋಗುವನು. ವಿದ್ಯಾಧರಾ ಎಂದು ಕೈ ನೋಡಿಕೊಂಡು ಮನೋರಮೆಯು ಅವನ ಬೆನ್ನು ಹತ್ತಬೇಕೆನ್ನುವಷ್ಟರಲ್ಲಿ ತಡೆದು ಹೌಹಾರಿದವಳಂತೆ ಅವನು ಹೋದತ್ತ ನೋಡುತ್ತ ನಿಲ್ಲುವಳು ).

ಮನೋರಮಾ:—( ಉದ್ವೇಗದಿಂದ ) ಅಯ್ಯೋ, ಅಯ್ಯೋ, ಬುದ್ಧಿಯಕಿಂತ ನನ್ನ ಮನಸ್ಸೇ ಕಲ್ಲಾಗಬಾರದಿತ್ತೇ ! ( ಎಂದು ರಂಗಭೂಮಿಯ ಎದುರಿನಲ್ಲಿ ಮನೆಯ ಬಾಗಿಲನ್ನು ತೆರೆದು ಒಳಕ್ಕೆ ಹೋಗುವಳು. ಬಾಗಿಲನ್ನು ಮುಚ್ಚುವದರೊಳಗಾಗಿಯೆ ಮನೆಯೊಳ

ಗಿನ ದೀಪವು ಪ್ರೇಕ್ಷಕರಂತೆ ಕಾಮಿಗೂ ಕಾಣಿಸುವದು. ಅವನು ಒಮ್ಮೆಲೆ ಆಶ್ಚರ್ಯದಿಂದ ಮುಂದೆ ಬಂದು )

ಕಾಮಿ:— ಅಯ್ಯೋ, ಇದೇನು ಅಡವಿಯೆಂದು ತಿಳಿದಿದ್ದೆ, ಮನೆಯ ಹಿಂದೆಯೇ ಇರುವೆನಲ್ಲ! ಇದೇನು ನಾಟಕದಲ್ಲಿಯಂತೆ ಅಡವಿಯು ಒಮ್ಮೆಲೆ ಅರಮನೆಯಾಯಿತೆ? ನಾಟಕ! ನಾನು ನೋಡಿದ್ದು ಇದೆಂತಹ ನಾಟಕ! ಕತ್ತಲೆಯಲ್ಲಿ ಕಣ್ಣುಗಳಂತೆ ಕಿವಿಯು ಕುರುಡಾಗುವದಿಲ್ಲೆಂದು ನನಗೆ ಈ ಅದ್ಭುತ – ಅದ್ಭುತವೆ ಅಲ್ಲವೆ? ರೋಗವಿದೆಯಂತೆ ಒಬ್ಬನಿಗೆ; ಅದನ್ನು ಹೇಳಬೇಕೆಂದು ವಿದ್ಯಾಧರನಿಗೆ ರೋಗ, ಹೇಳಬಾರದೆಂದು ಮನೋರಮಾಬಾಯಿಯವರ ಹೃದ್ರೋಗ. ಅಡವಿಯಲ್ಲಿ ಗಿಡದ ಮರೆ ನಿಂತ ದುಷ್ಯಂತನಿಗೆ ಶಕುಂತಲೆ ಸಿಕ್ಕಳಂತೆ. ಆದರೆ ನನಗೆ! ಅಯ್ಯೋ ಪಾಪ. ಮೋಹಿನಿಯನ್ನು ಮರೆತುಬಿಟ್ಟೆನಲ್ಲ. ಮೋಹಿನೀ, ಮೋಹಿನೀ– ಅವಳಿಗೆ ಇನ್ನೂ ಅಡವಿಯೆಂದೇ ಹೇಳುವೆ. ಮೋಹಿನೀ– ( ಎಂದು ಒದರುತ್ತ ಒಳಕ್ಕೆ ಹೋಗಿ ಅವಳನ್ನು ಕರಕೊಂಡು ಬರುವನು ). ಎಷ್ಟೊಂದು ಕೂಗಬೇಕು ನಿನ್ನ ನಲುವಾಗಿ?

ಮೋಹಿನಿ:— ( ಹೆದರುತ್ತ ) ನನಗೆ ಸುತ್ತುಮುತ್ತೆಲ್ಲ ಥೈ ಥೈ ಆಗಿ, ಹೆದರಿದೆ. ಗಟ್ಟಿ ಕಿವಿ ಮುಚ್ಚಿಕೊಂಡು ಕುಳಿತೆ. ಕಾಮೀ, ಮನೆಗೆ ಮುಟ್ಟುವೆವೇನೋ?

ಕಾಮಿ:— ಕಣ್ಣು ಮುಚ್ಚು ಹಾಗಾದರೆ.

ಮೋಹಿನಿ:— ( ಸಂಶಯದಿಂದಲೂ, ಹೆದರಿಕೆಯಿಂದಲೂ ) ಯಾಕೆ?

ಕಾಮಿ:— ( ಜಂಬದಿಂದ ) ಅಂದರೆ ಕಣ್ಣು ತೆರೆಯುವದರೊಳಗೆ ನಿನಗೆ ಮನೆ ಮುಟ್ಟಿಸುವೆ. (ಎಂದು ಎವೆಯುಬ್ಬಿಸಿ ಅವಳ ಕೈ ಹಿಡಿದು

ಗಂಭೀರವಾಗಿ ಹೆಜ್ಜೆಗಳನ್ನಿಡುತ್ತ ಸಾಗುವನು. ಮೋಹಿನಿಯು ಹೆದರಿಕೆಯಿಂದ ಸುತ್ತುಮುತ್ತು ನೋಡುತ್ತ ಅವನನ್ನು ಹಿಂಬಾಲಿಸುವಳು ).

(ತೆರೆ)

## ( ಮೊದಲನೆಯ ಅಂಕ ಮುಗಿದುದು )



# ಎರಡನೆಯ ಅಂಕ

## ಪ್ರವೇಶ ೧

( ಮೊದಲನೆಯ ಅಂಕಿನಿಂದ ಎಂಟು ದಿವಸಗಳಾದ ಮೇಲೆ. ಇದೀಗ ನಾವು ಬಂದದ್ದು ತಿಮ್ಮಾಜಿಯ ಮನೆ. ಅದೊ, ಇತ್ತಿಂದತ್ತ ತಿರುಗಾಡುತ್ತ ಯಾವನೊ ಒಳಕ್ಕೆ ಹೋಗಲಿಲ್ಲವೆ ? ಅವನೇ ತಿಮ್ಮಾಜಿ. ಸದ್ಯಕ್ಕೆ ಅವನು ವಕೀಲರ ಕಾರಕೂನನಲ್ಲ, ಸಂಸಾರಿಗನಿರುವನು. ಅದಕ್ಕೆಂದೇ ಉಟ್ಟದ್ದು ಒಂದು ಹಳೇ ದೋತರ, ಮೈಮೇಲೆ ಹೊದ್ದದ್ದು ಒಂದು ದೋತರ—ಅದೊ, ಮತ್ತೆ ಹೊರಗೆ ಬಂದನು. ಪ್ರೇಕ್ಷಕರ ಎಡಬದಿಯ ರಂಗಭೂಮಿಯ ಭಾಗದ ವರೆಗೆ ಬಂದು ನಿಲ್ಲುವನು. ಅವನು ನಿಂತದ್ದು ಒಂದುಕೋಣೆಯ ಬಾಗಿಲ ಮುಂದೆ. ಅದರ ಹತ್ತಿರ ಒಂದು ಕಂದೀಲು ಇಟ್ಟಿದೆ, ಇನ್ನೂ ದೀಪ ಹಚ್ಚಿಲ್ಲ. ಈ ಕೋಣೆಯೊಳಗೆ ತಿಮ್ಮಾಜಿಯ ಹೆಂಡತಿಯು ಇರುವಳು. ಆದರೇನು ? ತಿಮ್ಮಾಜಿಗೆ ಸ್ವಲ್ಪ ದಿವಸಗಳ ಹಿಂದೆಯೆ ಗಂಡುಮಗು ಹುಟ್ಟಿದೆಯೆಂದು ಮೇಲೆ ಹೇಳಿಲ್ಲವೆ ? ನಾಟಕಕಾರನ ದುರ್ದೈವ ! ತಿಮ್ಮಾಜಿಗೆ ಗಂಡುಮಗು ಹುಟ್ಟಿದ ಸಂಗತಿಯು ನಾಟಕಕಾರನಿಗೆ ಹೆಣ್ಣುಮಗು ಹುಟ್ಟಿದಂತೆ ತೊಡಕು ಆಗಿದೆ; ಅವನ ನಾಟ್ಯ ಸಂಸಾರದಲ್ಲಿ ತೊಂದರೆ. ತಿಮ್ಮಾಜಿಯು ಹೆಂಡತಿಯ ಕೂಡ ಮಾತನಾಡುವನೇನೊ ನಿಜ; ಆದರೆ ಮಗುವಿನ ತಾಯಿಯಾದ ಆಕೆ ಹೊರಗೆ ಬರುವಂತಿಲ್ಲ. ಈ ಹಾಳು ಸೃಷ್ಟಿಯು ನಾಟಕಕಾರನ ಅನುಕೂಲತೆಗಳನ್ನು ಲಕ್ಷ್ಯದಲ್ಲಿಡುವದಿಲ್ಲವಲ್ಲ! ಮಾಡುವದೇನು ? ಆ ಹೆಣ್ಣುಮಗಳ ಮಾತು ಪ್ರೇಕ್ಷಕರಿಗೆ ಯಾಕೆ, ನಾಟಕ ಬರೆಯುವವನಿಗೆ ಕೂಡ ಕೇಳಿಸುವಂತಿಲ್ಲ;

लिखितुमिदमलेख्यं नाटके कः समर्थः ?

ಎಂಬ ಸುಭಾಷಿತದಿಂದ ಎಲ್ಲರೂ ಸಮಾಧಾನ ಹಚ್ಚಿಕೊಳ್ಳಬೇಕಾಗಿದೆ.

ತಿಮ್ಮಾಜಿಯು ಏನನ್ನೊ ಶೋಧಿಸುತ್ತ ಮತ್ತೆ ಒಳಕ್ಕೆ ಹೋಗುವನು. ಕೆಲ ಹೊತ್ತಿನ ಮೇಲೆ ಅವಸರದಿಂದ ಬಂದು—)

( ಏನನ್ನೊ ಹುಡುಕುತ್ತಲೇ) ಬಂದೆ, ಬಂದೆ. ( ಕೋಣೆಯ ಹತ್ತಿರ ಬಂದು ) ಏನಂದಿ ? ಹುಂ. ನಾನೂ ಅದನ್ನೆ ನಡೆಸಿರುವೆ. ಹಚ್ಚುವೆ, ದೀಪ

ಹಚ್ಚುವೆ, ಇಷ್ಟರಲ್ಲಿಯೆ ಹಚ್ಚುವೆ. ಈ ಹಾಳು ಕಂದೀಲು ಎಲ್ಲಿದೆಯೊ? (ಅತ್ತಿತ್ತ ತಿರುಗಾಡುತ್ತ ಮತ್ತೆ ಒಳಗಿನಿಂದ ಕೇಳಿದಂತೆ ಮಾಡಿ) ಏನು? ಬಾಯಿಗೆ ರುಚಿ ಇಲ್ಲವೆ? ಎಲ್ಲಿಂದ ಬರಬೇಕು ರುಚಿ? ಒಂದೇಸಮನೆ ವಟ-ವಟ-ವಟ ಮಾತನಾಡಿದರೆ? ( ಹತ್ತಿರ ಬಂದು ) ತಲೆಶೂಲಿಯೆ? ಹಾ ಹಾ ( ನಗುತ್ತ ) ನನಗೆ ಬಾಯಿ – ರುಚಿಯೆಂದು ಕೇಳಿಸಿತು. ಕೇಳಿಸಬಾರದೇಕೆ? ಮುದುಕನಾದೆ, ಕೊಂಚ ಕಿವುಡನಾದೆ. ( ಮತ್ತೆ ಹತ್ತಿರ ಬಂದು ಏನನ್ನೊ ಕೇಳಿದಂತೆ ಮಾಡಿ ಗಟ್ಟಿಯಾಗಿ ನಕ್ಕು ) ಅಹಾ, ಮುದುಕನಲ್ಲವೆ ನಾನು? ಏನೇನೇನು? ಗಂಡುಮಗು ಹುಟ್ಟಿದರೆ ಮುದುಕನಲ್ಲವೆ? ಹೊ ಹೊ, ನಿನ್ನ ಇಚ್ಛೆ. ಅಯ್ಯೊ ( ಎಂದು ಹೊಟ್ಟೆಹಿಡಿಸವೆ ನಗುತ್ತ ತಿರುಗಾಡುವಾಗ್ಗೆ ಕಂದೀಲನ್ನು ಎಡಹುವನು. ಒಮ್ಮೆಲೆ ಸಿಟ್ಟಿನಿಂದ ಗದ್ದರಿಸುತ್ತ ) ಈ ಹಾಳು ಕಂದೀಲನ್ನು ಇಲ್ಲಿ ಯಾರು ಇಟ್ಟರೊ ಹಾದಿಯಲ್ಲಿ? ಹುಚ್ಚನಂತೆ ಯುಗಾನುಯುಗ ಹುಡುಕಬೇಕು ನಾನು!.... ಏನು? ನನಗೆ ಸಿಕ್ಕುವದಿಲ್ಲೆಂದು ನೀನೇ ಇಲ್ಲಿ ಇರಿಸಿದೆಯೊ? ಯೋಗ್ಯ, ಯೋಗ್ಯ. (ಅಣಕಿಸುತ್ತ ) ಓಹೊ, ನಿನಗೇನು ಗೊತ್ತು ನಾನು ಹುಡುಕುವೆನೆಂದು!.... (ಬೇಜಾರದಿಂದ) ತಂದೆ, ತರುವೆ, ತಡೆಯಬಾರದೆ? (ಎಂದು ಕಂದೀಲನ್ನು ರಂಗಭೂಮಿಯ ನಡುವೆ ತಂದಿಟ್ಟು, ಕುಳಿತುಕೊಂಡು, ದೀಪವನ್ನು ಹಚ್ಚಬೇಕೆನ್ನುವಷ್ಟರಲ್ಲಿ ) ಏನು? ತಲೆಶೂಲಿಯೆ? ಗೊತ್ತಿದೆ ನನಗೆ; ಮಾಡಲೇನು? ವಿದ್ಯಾಧರನನ್ನು ಕರೆಯಬೇಕೆಂದರೆ, "ಹೆಃ! ಗಂಡಸ ಡಾಕ್ತರ; ಏನ ಅಸಹ್ಯ!" ಎನ್ನುವಿ; ಹೆಂಗಸ ಡಾಕ್ತರಳನ್ನು ಕರೆಯಬೇಕೆಂದರೆ "ಯಾವ ಹೊಲೆಯ ಜಾತಿಯಾಕಿಯೊ ಏನೊ," ಎನ್ನುವಿ. ನೋಡಿದೆಯಾ! ಮತ್ತೆ ನೀನೇ ಅನ್ನುವಿ "ಬ್ರಾಹ್ಮಣ ಹೆಂಗಸ ಇಂಥಾ ಹೊಲಸ ಕೆಲಸ ಯಾಕೆ ಮಾಡ್ತಾರೇ"ಂತ. ಇನ್ನೇನು ಮುಪ್ಪಿನೊಳಗೆ ವೈದ್ಯಕಿ ಕಲಿಯಬೇಕೆ ನಾನು? ಏನೇನೇನು, ಏನಂದಿ? ವಾಹವ್ವಾ, ವಾಹವ್ವಾ. ನನಗೆ ಮಕ್ಕಳೂ ಬೇಡ, ವೈದ್ಯಕಿ ಶಿಕ್ಷಣವೂ

ಬೇಡ.... ನೋಡು ! "ಮುಪ್ಪಿನಾಗೆ ಮಕ್ಕಳು ಬೇಕಾದ್ರೆ ವೈದ್ಯಕೀ ಕಲೀಬೇಕು, ಯಾರ ಉಪಕಾರಾಂ" ತೆ ನನ್ನನ್ನೇ ಹಂಗಿಸತಾಳೆ ಮತ್ತೆ !........ ಏನು ? ನಾ ಮಾತಾಡ್ತೀನೆ ಬಹಳ ?........ ಸನ್ನಿಪಾತ ಆದವರ ಹಾಗೆ ನೀ ಮಾತಾಡುವಿ; ತಲೆಶೂಲಿ ಬರದೆ ಬಿಡುವದೆ? (ಸಂಶಯದಿಂದ) ಏನು, ಏನು ! ಕಂದೀಲಿನ ಕಾಡಿಗೆಯಿಂದ ತಲೆನೋವು ಆಗುವದೆ ? (ಮತ್ಸರ ತೋರಿಸುತ್ತ) ಆಗಲಿನ್ನು, ನಮ್ಮ ದೇವಿಯ ಗುಡಿ ಯೊಳಗೆ ಚಂದ್ರನನ್ನು ತಂದಿಡುವೆ, ಆಂ, ಅಂದರೆ ಕಾಡಿಗೆಯ ಕಾಟ ತಪ್ಪುವದು !.... (ಅರ್ಧ ತನ್ನಷ್ಟಕ್ಕೆ) ಮಕ್ಕಳನ್ನು ಹಡೆಯುವದೆಂದರೆ, ಸಮಾಜದ ಮೇಲೆ ಏನೊಂದು ದೊಡ್ಡ ಉಪಕಾರ ಹೊರಿಸುವರೆಂದೇ ಕಲ್ಪನೆ ಈ ಹೆಂಗಸರಿಗೆ !.... (ಕೋಣೆಯ ಕಡೆಗೆ ನೋಡಿ) ಮನೋರಮಾ ಬಾಯಿ....? ಏನಂದಿ ? (ತಿರಸ್ಕಾರದಿಂದ ನಕ್ಕು) ನಿನ್ನಂತಹಾ ಹುಚ್ಚು ಹೆಂಗಸರ ಕಲ್ಪನಾ ಅದು, ಗಂಡಸ ಮಕ್ಕಳು ಬೇಕಂತೆ ! ಸುಖದಿಂದ ಇದ್ದಾಳೆ ಆ ಪ್ರಾಣಿ.... ದತ್ತಕವೆ ?.... ಅಹುದು, ಅಹುದು. ದತ್ತಕ ಮಗನನ್ನು ಮಾಡಿಕೊಂಡರೆ ಏನು ತಪ್ಪು ?.... (ಮುಗುಳುನಗೆಯಿಂದ) ಏನೆ, ನಾನೇ ದತ್ತಕ ಹೋಗಿ ಬಿಡುವೆ, ನಿನ್ನ ಕಾಟ ತಪ್ಪಿಸಲಿಕ್ಕೆ.... ಆದರೆ ಮಾಡುವದೇನು, ದತ್ತಕ ಮಾಡಿಕೊಳ್ಳುವುದು ಅವರ ಮನಸ್ಸಿ ನೊಳಗೆಯೆ ಇಲ್ಲ....ಏನಂದಿ ?.... ದುಡ್ಡು ಯಾರಿಗೆ ಹೋಗುವದೆ ?.... ನಿನಗೆ ಯಾಕೆ ಎರಡನೆಯವರ ದುಡ್ಡಿನ ಚಿಂತೆ ? ಮೋಹಿನಿಯನ್ನು ಮದಿವೆ ಮಾಡಿಕೊಂಡವಗೆ ಆ ದುಡ್ಡು.... (ಸಿಟ್ಟಿನಿಂದ) ಏನು ?.... ಅಂದರೆ ನನಗೆ ಸಿಕ್ಕುವ ಆಶೆ ಇಲ್ಲವೆ ?.... ನನ್ನಂತಹಾ ಮುದುಕನಿಗೆ ಯಾರು ಹೆಣ್ಣು ಕೊಡುವರೆಂದು ನಗುವಿಯಾ ? (ಜಂಬದಿಂದ) ಮರೆತು ಬಿಡು ಇದನ್ನು. ಇನ್ನೂ ಹೆಣ್ಣು ಬರಲಾರದಷ್ಟೇನು ಮುದುಕನಲ್ಲ ನಾನು ?........ ಆದರೆ ನಿನ್ನನ್ನು ನೋಡಿ.... (ಒಮ್ಮೆಲೆ ನಕ್ಕು) ಅಲ್ಲಲ್ಲ, ಮಾತು ಹೇಳಿದೆ. ನಾನೆಲ್ಲಿ ಮದಿವೆಯ ಹೊಂಚು ಹಾಕಿರುವೆ,

ನೀನು ಇಷ್ಟೊಂದು ಕೋಪಿಸಲಿಕ್ಕೆ ?.... (ಸಂಶಯದಿಂದ) ಏನೂ?.... ಮಾತು ಸಾಕು ಎನ್ನಲಿಕ್ಕೆ ನಾನಲ್ಲಿ ಮಾತನಾಡಿದೆ ? ಏನೊ ಮಾತಿಗೆ ಮಾತು ಹೊರಟು ಹೇಳಿದೆ.... ಏನು ? (ಬೇಜಾರದಿಂದ) ಹಚ್ಚುವೆನೆ, ಹಚ್ಚುವೆನಲ್ಲ ! ಛೆ, ಈ ಹೆಂಗಸರಿಗೆ ಸಹನವೇ ಇಲ್ಲ. ದೀಪ ಹಚ್ಚ ಬೇಕೆಂದರೆ ಮಾತನಾಡಿಸುವಿ, ಮಾತನಾಡಿದರೆ ದೀಪ ಯಾಕೆ ಹಚ್ಚು ವದಿಲ್ಲೆಂದು ಅಬ್ಬರಿಸುವಿ. (ಹಟದಿಂದ) ಥೂ, ನಿನ್ನ ಕೂಡ ಮಾತೇ ಬೇಡ. (ಎಂದು ದೂರದಲ್ಲಿ ಕುಳಿತು) ಸಿಟ್ಟು ಯಾಕೆ ಅಂದರೆ? ಏನು ?.... ಪಕ್ಷಗಾರರ ಕೂಡ ಸಿಟ್ಟಿಗೇಳುವೆನೆ ? (ತಿರಸ್ಕಾರದಿಂದ) ಅವರೇನು ನಿನ್ನಂತೆ ಅಲ್ಲ. ಹೇಳಿದ್ದನ್ನು ಸುಮ್ಮನಾಗಿ ಕುಳಿತು ಕೇಳುವರು, ವಾದಿಸುವದಿಲ್ಲ. (ಸಂಶಯದಿಂದ) ಏನು, ನನ್ನ ಕೂಡ ಯಾರು ವಾದ ಹಾಕಬೇಕೆ ?........ ಛೆ, ನೋಡಿದಿಯಾ ! ಮತ್ತೆ ನೀನೇ ವಾದ ಬೆಳೆಸಿದೆ. ಇನ್ನು ಕಂದೀಲು ಹಚ್ಚುವವರೆಗೆ ಮಾತನಾಡುವದಿಲ್ಲ. (ಬೇಜಾರದಿಂದ) ಛೆ ! ಕಂದೀಲು ಇದ್ದಲ್ಲಿ ಕಾಡಿಗೆ; ಕಂದೀಲು ಬೇಡವೆಂದರೇನು ? ಸಂಸಾರ ಬೇಕು, ಮಕ್ಕಳು ಬೇಡ, ಈ ತೊಡಕು ಹೆಂಗಸರಿಗೆಯೆ ತೋಚುವದು ನೋಡು. (ಎಂದು ಕಂದೀಲನ್ನು ಹಚ್ಚಬೇಕೆಂದು ದೃಢ ನಿಶ್ಚಯ ಮಾಡುವದರಲ್ಲಿ ಬೆಂಕಿಯ ಕಡ್ಡಿ ಇಲ್ಲವೆಂದು ತಿಳಿದು ಬಂದು ಸಂತಪಿಸಿ ಎದ್ದು ಆರ್ಭಟಿಸುವನು). ಅವ್ಯವಸ್ಥೆಯೆಂದರೆ ಅವ್ಯವಸ್ಥೆ, ನಮ್ಮ ಗೃಹ ಲಕ್ಷ್ಮಿಯಾಗಿದೆ. ಕಂದೀಲು ಒಂದು ಕಡೆ, ಕಡ್ಡಿಯಪೆಟ್ಟಿಗೆ ಒಂದು ಕಡೆ—(ಗದ್ದರಿಸುತ್ತ) ಏನಂದಿ ? ನನಗೇನು ಗೊತ್ತು ?.... ಹೇಳಬೇಕು ಇಂತಹ ಜಾಗೆಯಲ್ಲಿ ಅದೆಯೆಂದು !.... (ಆಶ್ಚರ್ಯ ತೋರಿಸಿ) ಏನೂ ! ಸಿಗಲಿಲ್ಲವೆಂದರೆ ಕೇಳಬೇಕೆ ?.... ಹುಂ. (ಅಣಕಿಸುತ್ತ) ಓಹೊ, ಇನ್ನು ಎಲ್ಲ ಬಿಟ್ಟು ಅದೇ ಉದ್ಯೋಗವನ್ನೆ ಕೈಕೊಳ್ಳುವೆ ! ಪ್ರತಿಯೊಂದಕ್ಕೆ ಎಲ್ಲಿದೆ, ಎಲ್ಲಿದೆ ಎಂದು ಕೈಮುಗಿದು ನಿನ್ನ ಬೆನ್ನು ಹತ್ತುವೆ ! (ದ್ವೇಷ ದಿಂದ) ಇನ್ನು ಆಯುಷ್ಯದಲ್ಲಿ ಅದೊಂದೆ ಉಳಿದಿದೆಯಲ್ಲವೆ, ಮುಪ್ಪಿ

ನಲ್ಲಿ ಹೆಂಡತಿಯು ಸಲಹೆಯನ್ನು ಕೇಳುವದು !.... ( ತಿರಸ್ಕಾರದಿಂದ ) ನಾಲ್ಕು ಜನರು ಈ ಮುದುಕನ ಬುದ್ಧಿ ಎಲ್ಲಿದೆ ಎಂದು.... (ಸಿಟ್ಟಿನಿಂದ) ಹುಂ, ಸಾಕು. ನಗುವಿಯೇನು ? ( ಕೋಣೆಯ ಹತ್ತಿರ ಬಂದು ) ಎಲ್ಲಿದೆ ಕಡ್ಡಿಯ ಪೆಟ್ಟಿಗೆ ? ( ಒಳಗಿನಿಂದ ಹೆಂಡತಿಯು ಹೇಳುವಳು. ಅದನ್ನು ತಾನು ಪಠಿಸುವ ವಿದ್ಯಾರ್ಥಿಯಂತೆ ಮತ್ತೆ ಮತ್ತೆ ನುಡಿಯುವನು ). ಹುಂ. ( ತಲೆತೂಗಿ ) ಅಡಿಗೆಯ ಮನೆಯಲ್ಲಿ.... ಹೋದಕೂಡಲೆ ಬಾಗಿಲಿನ ಎಡಕ್ಕೆ.... ( ತಡೆದು ) ಯಾವ ಬಾಗಿಲು ? ಈ ಬಾಗಿಲವ್ರೊ, ಆ ಬಾಗಿಲವ್ರೊ ? ನಗುವಿ ಯೇನು ? ಯಾವ ಬಾಗಿಲ ಹೇಳದೆಯೆ ( ಅಣಕಿಸಿ ) ಬಾಗಿಲಿನ ಎಡಕ್ಕೆ ಅಂದರೆ ಏನು ತಿಳಿಯುವದು ?.... ( ಸಮಾಧಾನದಿಂದ ) ಹುಂ, ಈ ಬಾಗಿ ಲಿನ ಎಡಕ್ಕೆ.... ( ಮತ್ತೆ ತಡೆದು ) ನನ್ನ ಎಡಕ್ಕೆ ಅಹುದಲ್ಲೊ ?........ ಅಂದರೆ ! ( ಸಿಟ್ಟಿನಿಂದ ) "ಎಡ" ಎಂದು ಕೈಮಾಡುವಿ, ಅದು ನನ್ನ "ಬಲ" ಆಗುವದು.. ( ತಿರಸ್ಕಾರದಿಂದ ) ಛೆ, ಒಂದು ಸಣ್ಣ ಸಂಗತಿ ಸ್ವಲ್ಪದರಲ್ಲಿ ಹೇಳುವದಾಗುವದಿಲ್ಲ ಈ ಹೆಂಗಸರಿಗೆ ! ( ಮತ್ತೆ ಕೇಳುತ್ತ ) ಹುಂ, ಹೋದಕೂಡಲೆ ಈ ಬಾಗಿಲಿನ, ನನ್ನ ಎಡಕ್ಕೆ.... ನನ್ನದೆ ಎಡ ಅಹುದಲ್ಲೊ ? ನಾಚಿಕೆ ಬೇರೆ ನನ್ನ ಎಡ ಎಂದು ಹೇಳಲಿಕ್ಕೆ ! ( ಉಸುರ್ಗರೆದು ) ಕಪಾಟಿನಲ್ಲಿ— ಹುಂ; ಮೂರನೆಯ ಫಳಿಯ ಮೇಲೆ- ಹುಂ; ( ಒಮ್ಮೆಲೆ ತಡೆದು ) ಮೂರನೆಯದೆಂದರೆ ? ಕೆಳಗಿನಿಂದೊ ? ಮೇಲಿಂದೊ ? ( ಬೇಜಾರವಾಗಿ ) ಛೆ !.. ಹುಂ.. ಕೆಳಗಿನಿಂದ ಮೂರನೆಯ ಫಳಿಯ ಮೇಲೆ-ಹುಂ; ಅರಿಶಿಣಡಬ್ಬಿಯ ಹಿಂದೆ- ಹುಂ;........ ( ಮತ್ತೆ ತಡೆದು, ಸಂಶಯದಿಂದ ) ಅರಿಶಿಣದ ಢಬ್ಬಿ ಎಂದು ತಿಳಿಯುವದು ಹೇಗೆ ? ( ನಿರುಪಾಯನಾಗಿ ) ನೋಡಿರಿ. ಅದು ಕಡ್ಡಿಪೆಟ್ಟಿಗೆಯ ಹತ್ತಿರ ಇದೆಯಂತೆ ! ಕಡ್ಡಿಯಪೆಟ್ಟಿಗೆ ಎಲ್ಲಿದೆಯೆಂದರೆ, ಅರಿಶಿಣಡಬ್ಬಿಯ ಹಿಂದೆ ಇದೆಯಂತೆ ! (ನಿರಾಶೆಯಿಂದ) ಸಾಕು, ಬಿಡು. ನಾನೇ ಹುಡುಕಿಕೊಂಡು ಬರುವೆ. ದಿನಾಲು ಬೇಕಾಗುವ ಪದಾರ್ಥ, ಅದನ್ನು ಒಯ್ದು ಗುಹೆ

ಯೊಳಗೆ ಇಡುವರು. ಏನು ಸಂಸಾರ ಮಾಡುವರೊ ಈ ಹೆಂಗಸರು ! ನಾವು ಅದನ್ನು ನೋಡುವದಿಲ್ಲವೆಂದು ಎಲ್ಲ ತಡೆದು ನಡೆದಿದೆ....ಹುಂ, ಇರಲಿ ಬಿಡು; ಹುಡುಕಿ ತರುವೆ. ಮನೆಯೊಳಗೆಯೆ ಇದ್ದರೆ ಹೋಗುವದೆಲ್ಲಿ? ( ಎಂದು ಸ್ವಲ್ಪ ಮುಂದಕ್ಕೆ ಹೋಗಿ ತಿರುಗಿ ಬಂದು ) ಏನೆ, ಅಡಿಗೆಯ ಮನೆಯಲ್ಲಿಯೆ ಅಲ್ಲವೆ ?.... ತಿಳಿಯಿತು, ತಿಳಿಯಿತು. ( “ ಏನು ತಿನ್ನುವ ಪದಾರ್ಥವೆಂದು ಅದನ್ನು ಅಡಿಗೆಯ ಮನೆಯೊಳಗಿಡುವರೊ ! ” ಎಂದು ಗುಣಗುಟ್ಟುತ್ತ ಒಳಕ್ಕೆ ಹೋಗುವನು. ಆಶ್ಚರ್ಯ ! ಇಷ್ಟರಲ್ಲಿಯೆ ಸಿಕ್ಕಿತೆ ? ಕುಲುಕುಲು ನಗುತ್ತ ತಿಮ್ಮಾಜಿಯು ಬರುವನು. ಕಂದೀಲಿನ ಹತ್ತರ ಕುಳಿತುಕೊಳ್ಳುವಾಗ್ಗೆ ಕೋಣೆಯ ಕಡೆಗೆ ನೋಡುತ್ತ ) ಏನೂ !.... ಸಿಕ್ಕಿತು.( ಜಂಬದಿಂದ ) ಸಿಕ್ಕದೆ ಏನು? ನೀನು ಇಷ್ಟೊಂದು ದ್ರಾವಿಡೀ ಪ್ರಾಣಾಯಾಮದಿಂದ ಹೇಳುವ ಕಾರಣವೇ ಇದ್ದಿಲ್ಲ, ನನಗೆ ಮೊದಲೇ ಗೊತ್ತಿದ್ದರೆ ನಿನಗೆ ಕೇಳುತ್ತಿರಲೇ ಇಲ್ಲ. ಕಣ್ಣು ಮುಂದೆಯೆ ಬಿದ್ದಿದೆ, ಅದಕ್ಕೆ ಎಷ್ಟೊಂದು- ( ಎಂದು ಕಡ್ಡಿಯ ಪೆಟ್ಟಿಗೆಯನ್ನು ತೆರೆಯಲು ಅದು ಬರಿದಾಗಿದೆಯೆಂದು ಗೊತ್ತಾಗಿ ಸಿಟ್ಟಿನಿಂದ ಅದನ್ನು ಬೀಸಾಡಿ, ಎದ್ದು ಗದ್ದರಿಸುತ್ತ ) ಸುಡಲಿ ಈ ಹಾಳು ಸಂಸಾರ. ಕಡ್ಡಿ ಇದ್ದರೆ ಮದ್ದು ಇಲ್ಲ, ಮದ್ದು ಇದ್ದರೆ ಕಡ್ಡಿಯಿಲ್ಲ. (ಎಂದು ಸಿಟ್ಟಿನ ಭರದಲ್ಲಿ ಏನು ಮಾಡುವನೊ ನಮಗೆ ತಿಳಿಯುವಂತಿಲ್ಲ, ಯಾಕೆಂದರೆ ಇಷ್ಟರಲ್ಲಿ ದೊಪ್ಪೆಂದು— )

(ತೆರೆ).



## ಪ್ರವೇಶ ೨

( ಉದ್ಯಾನವೆಂದು ಹೆಸರಿಟ್ಟ ಒಂದು ಬಟ್ಟ-ಬಯಲು. ಅದೇ ದಿವಸ, ಅದೇ ವೇಳೆಗೆ ಕಾಮಿಯು ತನ್ನ ನಾಲ್ಕು ಜನ ಮಿತ್ರರೊಡನೆ ತಿರುಗಾಡಲು ಬಂದಿರುವನು. ವಯಸ್ಸಿನಿಂದ ಈ ನಾಲ್ಕು ಜನರು ಕಾಮಿಯ "ಸರಿಕೆ" ರೆಂದು ಹೇಳಬಹುದು. ಕಾಮಿಯ ಮನಸ್ಸಿನಲ್ಲಿ ಯಾವುದೋ ಒಂದು ಉದ್ವೇಗವಿದ್ದಂತೆ ಕಾಣುವದು. ಕೆಳಗೆ ಮೋರೆ ಮಾಡಿಕೊಂಡು ಸಾವಕಾಶವಾಗಿ ಹೆಜ್ಜೆಗಳನ್ನಿಡುತ್ತ ನಡೆದಿರುವನು. ಅವನ ಗೆಳೆಯರು ಆದರದಿಂದಲೂ ಆಶ್ಚರ್ಯದಿಂದಲೂ ಒಮ್ಮೆ ಅವನನ್ನು, ಒಮ್ಮೆ ತಮ್ಮ ತಮ್ಮೊಳಗೆ ನೋಡುತ್ತ ಹಿಂಬಾಲಿಸಿರುವರು. ಇಷ್ಟರಲ್ಲಿ ಕಾಮಿಯು ಒಮ್ಮೆಲೆ ಹೂಂ ಎಂದು ಉದ್ದವಾಗಿ ಉಸುರುಗರೆಯುವನು. ಹಣೆಗೆ ಕೈ ಹಚ್ಚಿ ಆಕಾಶವನ್ನು ನೋಡುತ್ತ ನಿಲ್ಲುವನು ).

೧ನೆ:— ( ಮೆಲ್ಲಗೆ ಉಳಿದ ಮುವ್ವರಿಗೆ ಸನ್ನೆ ಮಾಡಿ ) ಏ, ಕಾಮಿಗೆ ಸ್ಫೂರ್ತಿ ಬಂದಿತು ನೋಡು.

೨ನೆ:— ( ಸೂಕ್ಷ್ಮವಾಗಿ ನಿರೀಕ್ಷಿಸಿ ತಲೆ ಅಲ್ಲಾಡಿಸುತ್ತ ) ಉಂಹುಂ. ಅಲ್ಲ. ನಾನು ನೋಡಿರುವೆ ಅವನಿಗೆ ಸ್ಫೂರ್ತಿ ಬರುವದನ್ನು. ಸ್ಫೂರ್ತಿ ಬಂದಿತೆಂದರೆ ಯಾರನ್ನೂ ಕೇಳುವದಿಲ್ಲ ಅವ. ಹೋದವನೇ ಮುಸುಕು ಮುಚ್ಚಿ ಮಲಗಿ ಬಿಡುವ.

೩ನೆ:— ನಾನೊಮ್ಮೆ ನೋಡಿದ್ದೆ ಅವನಿಗೆ ಸ್ಫೂರ್ತಿ ಬಂದದ್ದನ್ನು. ಸ್ಫೂರ್ತಿ ಬಂದಿತೆಂದರೆ ಕಂಡವರನ್ನು ಹೆಂಗಸು ಎಂದು ಕೈ ಹಿಡಿಯುವ.

೧ನೆ:— ಸ್ಫೂರ್ತಿಗೇನು? ಇಂತಹುದೆಂದೇ ಹೇಳಲು ಬರುವದಿಲ್ಲ. ವೇಳೆ ನೋಡಿ, ಪ್ರಸಂಗ ನೋಡಿ, ಅದರ ಸ್ವರೂಪ ಬದಲಾಗುವದು. ಅದೇಕೆ? ಮೊನ್ನೆ ಅಂಗಡಿಗೆ ಹೋದಾಗ್ಗೆ

ಸ್ಫೂರ್ತಿ ಬಂದಿತ್ತು. ಹಣ ಕೊಡುವದನ್ನು ಮರೆತೇ ಹೊರಟಿದ್ದ.

೪ನೆ:— ( ತಿರಸ್ಕಾರದಿಂದ ) ಅಂಗಡಿಯವ ಬೆನ್ನು ಹತ್ತಿ ಬಂದ ಮೇಲೆ ಇಳಿದಿರಬೇಕು ಸ್ಫೂರ್ತಿ.

೨ನೆ:— ( ಕೊಂಚ ಕೋಪದಿಂದ ) ನಿನಗೆ ಅದರಲ್ಲಿ ವಿಶ್ವಾಸವಿರದಿದ್ದರೆ ಬಾಯಿ ಮುಚ್ಚು. ಎರಡನೆಯವರನ್ನು ಹಳಿಯಬೇಡ.

೪ನೆ:— ( ಮೊದಲಿನಂತೆ ) ಎಲ್ಲಿಯ ಸ್ಫೂರ್ತಿ? ನನಗೆ ಗೊತ್ತಿದೆ; ಅವನ ಮೈಮೇಲೆ ಪ್ರಸಂಗ ಬಂದಿದೆ, ಸ್ಫೂರ್ತಿಯಲ್ಲ.

೩ನೆ:— ನಾವು ಹೇಳುವದೂ ಅದೆ. ಕವಿಯ ಮೈಮೇಲೆ ಬಂದ ಪ್ರಸಂಗಕ್ಕೆ ಸ್ಫೂರ್ತಿ ಎನ್ನುವರು.

೪ನೆ:— (ನಗುತ್ತ) ಆದರೆ ಕಾಮಿಯ ಮೈಮೇಲೆ ಬಂದ ಪ್ರಸಂಗಕ್ಕೆ ಮೂರ್ತಿಯೆನ್ನುವರು, ಮೂರ್ತಿ. (ಮೆಲ್ಲಗೆ) ಒಂದು ಹುಡುಗೆಯ ಮೂರ್ತಿ.

ಮೂವ್ವರು:— (ಆತುರತೆಯಿಂದ ಆಂ ಎಂದು ಮುಂದೆ ಬರುವರು.)

೪ನೆ:— (ಕಾಮಿಯ ಕಡೆಗೆ ನೋಡುತ್ತ ಮೆಲ್ಲಗೆ) ಅವನ ತಂದೆಯು ಅವನ ಮದಿವೆ ಮಾಡಬೇಕೆಂದು ಮಾಡಿರುವ.

೧ನೆ:— (ನಿರಾಶೆಯಿಂದ) ಇಷ್ಟೆ ಅಹುದಲ್ಲೊ! ಅದೇನು, ಎಲ್ಲರ ಮೇಲೆ ಬರುವ ಪ್ರಸಂಗ.

೩ನೆ:— ಹಹಾ, ಈಗ್ಗೆ ನನ್ನ ಸ್ಮರಣೆಗೆ ಬಂದಿತು. ಮೊನ್ನೆ ತೋರಿಸಲು ಬಂದಿದ್ದರು, ಅದೇ ಹುಡುಗೆ ಅಹುದಲ್ಲೊ? (೪ನೆ. ನು ನಗುತ್ತ ತಲೆದೂಗುವನು).

೨ನೆ:— (ಸಂಶಯದಿಂದ) ನಗುವಂತಹದೇನಿದೆಯೊ ಅದರಲ್ಲಿ?

ಕಾಮಿ:— (ನಿಂತಲ್ಲಿಯೆ) ಅಹಹಾ! ಎಂತಹದು ಏನಾಯಿತು!

೧ನೆ:— ( ಒಮ್ಮೆಲೆ ಕಿಸೆಯೊಳಗಿಂದ ಕಾಗದ ತೆಗೆದು ಬರೆದುಕೊಳ್ಳುವನು). ಅಹಹಾ, ಏನಿತ್ತು ಏನಾಯಿತು. (ಎಂದು ಗುಣಗುಟ್ಟುವನು).

೨ನೆ:— (ಅವನನ್ನು ತಡೆದು) "ಏನಿತ್ತು" ಅಲ್ಲೊ, "ಎಂತಹದು ಏನಾಯಿತು" ( ೧ನೆ. ನು "ಹೀಗೊ" ಎಂದು ಬರೆದುಕೊಳ್ಳುವನು).

೪ನೆ:— (ನಗುತ್ತ) ಯಾಕೆ ಬರೆಯುವಿ ? ನಾನು ಹೇಳುವೆ ಅದರ ಅರ್ಥವನ್ನು. ಆ ಮೊನ್ನಿನ ಹುಡುಗೆಯನ್ನು ನೋಡಿದಂದಿನಿಂದ ಅವನ ಕಾವ್ಯವೀಣೆಯ ತಂತಿಯೇ ಹರಿದಿದೆ.

೨ನೆ:— ಯಾಕೆ ? ಹುಡುಗೆಯು ಕಾಣಿಸಲಿಕ್ಕೆ—?

೩ನೆ·— (ನಕ್ಕು) ಕಾಣಿಸಲಿಕ್ಕೆ ? ಹಹಾ. ನೀನು ಹೇಳಿದ ಮಲಗುವ ಸ್ಫೂರ್ತಿ ಬಂದು, ಕಣ್ಣು ಮುಚ್ಚಿ ನೋಡಿದ್ದರೆ ಮಾತ್ರ, ಹೆಂಗಸು ಎನ್ನಬಹುದಾಗಿತ್ತು.

ಕಾಮಿ·— (ಗಟ್ಟಿಯಾಗಿ ಉಶ್ ಎಂದು ಅತ್ತಿತ್ತ ತಿರುಗಾಡುತ್ತ ಹೋಗುವನು.)

೪ನೆ:— ( ಅವನು ಹೋದದ್ದನ್ನು ನೋಡಿ ) ಹೋದನಲ್ಲವೆ? ಕೇಳಿರಿ, ಕೇಳಿರಿ. ಆ ಹುಡುಗೆಯನ್ನು ವರ್ಣಿಸುವ ಸ್ಫೂರ್ತಿ ಬಂದಿದೆ ನನಗೆ.

೧ನೆ:— ( ಸುತ್ತಲು ನೋಡಿ) ಅತ್ತಿತ್ತ ಜನರಿರುವರು. ಹೇಳುವಂತೆ ಇದ್ದರೆಯೆ ಹೇಳು.

೪ನೆ·— ( ಆವೇಶದ ಸೋಗಿನಿಂದ ) ಸ್ಫೂರ್ತಿಗೆ ಮಾನ–ಮರ್ಯಾದೆಯಿಲ್ಲ. ( ೩ನೆ ನು ನಗುವನು ). ಅಯ್ಯೊ, ಸ್ಫೂರ್ತಿಗೆ ಕಣ್ಣು ಕೂಡ ಕಳೆದು ಹೋಗಬಾರದಾಗಿತ್ತೆ ? ಅಹಹ ! ಅದೆಂತಹ ರೂಪ ! ಬಾಣನ ಕಾದಂಬರಿಯ ವರ್ಣನೆಯನ್ನು ಓದಿಲ್ಲವೆ ನೀವು ? ಕಾದಂಬರಿಯ ಕುಚಗಳು ಅಡ್ಡ ಬಂದುದರಿಂದ, ತನಗೆ ಅವಳ ಸುಂದರ ಮುಖವನ್ನು

ನೋಡುವದಾಗಲಿಲ್ಲವೆಂಬ ಚಿಂತೆಯಿಂದ ಕೊರಗಿತೇನೊ ಎನ್ನುವಂತೆ, ಅವಳ ಟೊಂಕವು ಸಣ್ಣಾದಿತ್ತಂತೆ. ಆದರೆ ಇವಳ ಟೊಂಕವು ಅಷ್ಟೊಂದು ಹೇಡಿಯೆ? ಮುಖವನ್ನು ನೋಡಿಯೆ ತೀರುವೆನೆಂಬ ಹೆಮ್ಮೆಯಿಂದ ಹರವಿ ನಿಂತಿದೆ, ಹರವಿ! ಈ ಟೊಂಕವು ನಡುವೆ ಒಂದು ಪಾದಕಮಲಗಳು ಕಾಣಿಸದಂತಾಗಲು ಬದಿಯಿಂದ ಹಣಿಕಿಕ್ಕಿ ನೋಡುವವೇನೊ ಎನ್ನುವಂತೆ ಈ ಕಣ್ಣು ಈ ಬದಿಗಿದ್ದರೆ, ಆ ಕಣ್ಣು ಆ ಬದಿಗೆ. ಪಾಪ! ಚಿಕ್ಕಂದಿನಲ್ಲಿ ಮಂಗನಾದ ಹನುಮಂತನು ಇವಳನ್ನು ನೋಡಿದನಂತೆ; ನೋಡಿದ್ದೊಂದೇ ತಡ, ಮುಖ ತಿರುಗಿಸಿದವನು ಇಂದುವರೆಗೂ ಎದುರು ನೋಡುವ ಧೈರ್ಯವಾಗಿಲ್ಲ ಅವನಿಗೆ! (ನಗುವನು).

೨ನೆ:— (ತಿರಸ್ಕಾರದಿಂದ) ಸಾಕು ಬಿಡು, ನಗುವಿಯೇನು? ಅಶ್ಲೀಲ!

೩ನೆ:— ತರುಣ ವಯಸ್ಸಿನಲ್ಲಿ ಅಶ್ಲೀಲ ಮಾತಿಗೆ ನಗದಿದ್ದರೆ—

೧ನೆ:— (ನಗೆ ತಡೆಯುತ್ತ) ಸ್ಥಿಜಾಹಾ (ಎಂದು ಗಹಗಹಿಸಿ ನಗುವನು).

೨ನೆ:— (ನಗೆ ತೋರಿಸಬಾರದೆಂಬ ಯತ್ನದಲ್ಲಿ) ಇದಕ್ಕೆ ನನ್ನ ಸಮ್ಮತಿ ಇಲ್ಲ. ಆದರೂ ಬಹುಮತದಿಂದ ನಗಬೇಕೆಂದು ಗೊತ್ತಾದುದರಿಂದ ನಾನೂ ನಗುವೆ. (ನಗುವನು).

೩ನೆ:— ತಡೆ, ತಡೆ. ನಿಮ್ಮ ನಗೆ ಕೇಳಿ ತಿರುಗಿ ಬಂದಾನು ಕಾಮಿ. ನನಗೆ ಇನ್ನೊಂದು ಮೋಜು ಹೇಳಬೇಕಾಗಿದೆ.

೧ನೆ: ೨ನೆ:— (ಆತುರತೆಯಿಂದ) ಏನದು, ಏನದು?

೩ನೆ:— (ನಗುತ್ತ) ಆ ಹುಡುಗಿ ಕಲಿತವಳಂತೆ! ನಮ್ಮ ತಿಮ್ಮಾಜಿ ಅವಳನ್ನು ಪರೀಕ್ಷಿಸಿದ.

೪ನೆ:— ಹಹಾ! ಅದನ್ನು ಹೇಳುವಿಯಾ?

೩ ನೆ:- ಅದನ್ನೆ. ( ೪ನೆ. ನಿಗೆ ) ಬಾ, ಬಾ. ನಾನು ಆ ಹುಡುಗೆ ಯಾಗುವೆ, ನೀನು ತಿಮ್ಮಾಜಿಯಾಗಿ ಪರೀಕ್ಷಿಸು. (ಎಂದು ದೋತರದ ಸೆರಗು ಸುತ್ತಿ, ಮುಖ ತಗ್ಗಿಸಿಕೊಂಡು ಕೂಡ್ರುವನು ).

೪ ನೆ:— ( ಸೋಗಿನಿಂದ ) ಹಂ-ಹಂ-( ಕೆಮ್ಮಿ, ಸೌಮ್ಯವಾಗಿ ) ತಂಗೀ, "ನಾನು" ಇದರ ಬಹುವಚನ ಏನಮ್ಮಾ ? (ಉತ್ತರವಿಲ್ಲ). ಹೇಳಮ್ಮಾ, ಹೇಳು ತಂಗೀ. ಎಲ್ಲರೂ ನಿನ್ನವರೇ. ನಾಚುವ ಕಾರಣವಿಲ್ಲ. "ನಾನು" ಇದರ ಬಹುವಚನ ಏನಮ್ಮಾ?

೩ ನೆ:— ( ಹುಡುಗೆಯ ದನಿಯಲ್ಲಿ ) "ನೀವು".

೪ ನೆ:— ( ಆಶ್ಚರ್ಯದಿಂದ ) ಆಂ! ( ಸೋಗಿನಲ್ಲಿಯೆ ) ಅಹಹ! ಎಂತಹ ಚಾಣಾಕ್ಷ ಹುಡುಗೆ! ( ಎಲ್ಲರೂ ಖೊಳ್ಳೆಂದು ನಗುವರು. ಕಾಮಿಯು ಬರುವನು. ಅವನ ಮುಖಮುದ್ರೆಯಲ್ಲಿ ಇದುವರೆಗೂ ಹೆಚ್ಚುಕಡಿಮೆಯಿಲ್ಲ. ಕೊಂಚ ಕನಿಕರದಿಂದಲೂ, ಕೊಂಚ ಆಶ್ಚರ್ಯದಿಂದಲೂ ತನ್ನ ಗೆಳೆಯರನ್ನು ನೋಡಲು ಅವರು ನಗೆ ತಡೆಯುವರು ).

ಕಾಮಿ:— ( ಗುರುವಿನ ಗಾಂಭೀರ್ಯದಿಂದ ) ನನ್ನ ಗೆಳೆಯರಿರಾ, ಎಂದಾದರೂ ಪ್ರೇಮಪಾಶದಲ್ಲಿ ಸಿಕ್ಕಿರುವಿರೊ ? ( ಗೆಳೆಯರು ಸಂಶಯದಿಂದ ಒಬ್ಬರನ್ನೊಬ್ಬರು ನೋಡುವರು ).

೪ ನೆ:— ( ಕೊನೆಗೆ ಧೈರ್ಯ ಮಾಡಿ ) ಹುಡುಗೆ ಎಂತಹದು ಹೇಳಿದೆಯೆಂದರೆ—

೧ ನೆ:— ( ಅವನ ದಡ್ಡತನಕ್ಕೆ ನಿರುಪಾಯನಾದಂತೆ ) ನಿನ್ನ ಮೇಲೆ ಪ್ರೇಮಪಾಶ ಬಿಗಿದ ಹುಡುಗೆ ಎಂತಹದು, ಕಾಮಿ ಹೇಳಬೇಕೆ ?

೪ ನೆ:— ( ಹಟದಿಂದ ) ಹುಡುಗೆಯ ಸ್ವರೂಪ ಗೊತ್ತಿಲ್ಲದೆ ಪ್ರೇಮ

ಪಾಶದಲ್ಲಿ ಬೀಳುವದು ಹೇಗೆ? (೩ನೆ. ನಿಗೆ ಕಣ್ಣು ಸನ್ನೆ ಮಾಡಲು ಅವನು ಬಾಯಿಮುಚ್ಚಿ ನಗುವನು). ಬಲುಮೆಯಿಂದ ಬಿಗಿಯಲು ಅದೇನು ಯಮಪಾಶವೆ?

ಕಾಮಿ:— (ಯಾವಾಗಿನಂತೆ) ನೀನಂದದ್ದು ನಿಜ. ಯಮಪಾಶ ಬೇರೆ, ಪ್ರೇಮಪಾಶ ಬೇರೆ.

೨ನೆ:— (ಆನಂದದಿಂದ) ಶಹಾಪ್ಪಾಶ.

ಕಾಮಿ:— (ಅವನನ್ನು ಲಕ್ಷ್ಯದಲ್ಲಿ ತಾರದೆ) ಆದರೆ–ಆದರೆ–(ಕಳಕಳಿಯಿಂದ) ನನ್ನ ರಸಿಕ ಮತ್ತು ತರುಣ ಗೆಳೆಯರೆ, ಸದ್ಯಕ್ಕೆ ಈ ಕಾಮಿಗೆ ಪ್ರೇಮಪಾಶವು ಯಮಪಾಶವೇ ಆಗಿದೆ. (ಉದ್ವೇಗದಿಂದ ಆಕಾಶದ ಕಡೆಗೆ ನೋಡುತ್ತ ನಿಲ್ಲುವನು).

೪ನೆ:— (ಮೆಲ್ಲಗೆ ೩ನೆ. ನಿಗೆ) ಆ ಪೊನ್ನಿನ ಹುಡುಗೆಯೆ ಯಮದೂತ ಕಾಣಿಸುವದು. (ಇಬ್ಬರೂ ಮುಗುಳುನಗೆ ನಗುವರು).

ಕಾಮಿ:— (ತಿರಸ್ಕಾರದಿಂದ, ಹೆಮ್ಮೆಯಿಂದ, ಹಲ್ಲು ಕಚ್ಚಿ) ಆಗಲಿ. ಯಮನ ಯಮನಾಗುವೆ, ಪಾಶದ ಪಾಶನಾಗುವೆ, ಸಾವಿತ್ರಿಯ ಸತ್ಯವಾನನಾಗುವೆ.

೩ನೆ:— (ಸಂಶಯದಿಂದ) ಸತ್ಯವಾನನು ಯಮಪಾಶದಲ್ಲಿ ಬೀಳಲಿಲ್ಲವೆ?

೧ನೆ:— (ತಪ್ಪು ತಿದ್ದುವ ಶಿಕ್ಷಕನಂತೆ) ಇಲ್ಲ, ಯಮನೇ ಸಾವಿತ್ರಿಯ ಪಾಶದಲ್ಲಿ.

ಕಾಮಿ:— (ಮದನ–ಅಲ್ಲಲ್ಲ... ಚಳಿಯ ಬಾಧೆಯಾದವನಂತೆ ಮೈ ನಡುಗಿಸುತ್ತ) ಅದಾಗದಿದ್ದರೆ ಸತ್ಯವಂತನ ಸಾವಿತ್ರಿಯಾಗುವೆ. (ಆವೇಶದಿಂದ) ಯಮ ಬರಲಿ—

೧ನೆ:— (ಒಮ್ಮೆಲೆ) ಅಯ್ಯೊ, ಬಂದಿತು ಸ್ಫೂರ್ತಿ. (ಎಂದು ಕಾಮಿಯನ್ನು ಗಟ್ಟಿಯಾಗಿ ಹಿಡಿಯುವನು).

( ಪ್ರೇಕ್ಷಕರೆ, ಭಾವ-ವಿಕಾರಗಳನ್ನು ಬಣ್ಣಿಸುವದರಲ್ಲಿ ಇಷ್ಟೊಂದು ಪ್ರೌಢಿಯನ್ನು ಇದುವರೆಗೆ ನಾವು ತೋರಿಸಿದರೂ ಸದ್ಯದ ಕಾಮಿಯ ಸ್ಥಿತಿಯನ್ನು ಬಣ್ಣಿಸುವ ಶಬ್ದಯೋಜನೆಯಿಲ್ಲ ನಮಗೆ. ತಾವುಗಳಲ್ಲಿ ಎಷ್ಟೋ ಜನ ಕವಿಗಳಿರಬಹುದು; ಕಾವ್ಯಸ್ಫೂರ್ತಿಯ ಕಟು ಅನುಭವವು ತಮಗೆ ಇರಬಹುದು. ಛೆ, ಅದೂ ಶಕ್ಯವಿಲ್ಲ. ಆಗಲಿ. ಅಕ್ಕತಂಗಿಯರಿರಾ, ನಿಮ್ಮ ನಿಮ್ಮ ಅಣ್ಣತಮ್ಮಂದಿರು, ಗಂಡಂದಿರು ಎಂದಾದರೂ ಚೇಳು ಕಡಿದಂತೆ ಹುಚ್ಚೆದ್ದು—ಹಾ. ನೋಡಿ, ನೋಡಿ. ಗೆಳೆಯನು ಹೆಚ್ಚೆಚ್ಚು ಗಟ್ಟಿಯಾಗಿ ಹಿಡಿದಂತೆ ಕಾಮಿಯು ಕಾದಿಸುವ ರಹಸ್ಯದಂತೆ ಹೆಚ್ಚೆಚ್ಚು ಹೊರಪುಟಿಯುವನು. ಛೆ, ನಮ್ಮಿಂದಂತೂ ಬಣ್ಣಿಸಲು ಶಕ್ಯವಿಲ್ಲ. ಇದೊ, ಲೆಕ್ಕಣಿಕೆಯನ್ನು ಕೆಳಗಿಡುವೆವು. ನಮ್ಮ ಈ ಗೋಪ್ಯವನ್ನು ತಿಳಿದುಕೊಂಡ ವಿಮರ್ಶಕರು ಅದರ ದುರುಪಯೋಗ ಮಾಡಬಾರ......ಹಾ ! )

ಕಾಮಿ:— ( ಆವೇಶದಿಂದ ) **ಯಮ ಬರಲಿ** ( ಮುಂದಿನ ನಾಲು ಬರುವವರೆಗೆ ಇದನ್ನೆ ನುಡಿಯುವನು ).

**ಮಮ ಹೊರಲಿ**

**ಗಮಗಮ ಗಮ ಶ್ರಮ ತರಲಿ !**

**ತರಲೆ ಸರಲೆ**–( ಮುಂದೆ ಸ್ಮರಣೆಗೆ ಬರದಂತಾಗಲು ಹೆಚ್ಚು ಆವೇಶದಿಂದ ಅದನ್ನೆ ತಿರುತಿರುಗಿ ಮುಖವಿಕೃತಿಗಳಿಂದ ನುಡಿದು ) **ತರಲೆ ಸರಲೆ**

**ಬರದಿರಲೆ**–(ಮುಂದೇನು ? ಮತ್ತೆ ಗೋಳಾಟ !)

**ಕೊರಲ ಕೊಯ್ವೆ ನಾ||** (ಪಾಪ ! ಹುಶ್ ಎಂದು ನಿಲ್ಲುವನು).

೨ನೆ:— ( **ಕಳಕಳಿ**ಯಿಂದ ) ನೋಡಿದೆಯಾ ಪ್ರೇಮದ ಆವೇಶ !

೪ನೆ:— ( ಸಂಶಯದಿಂದ ) ಆ " ಸರಲೆ ತರಲೆ " ಯಾರು ಗೊತ್ತಿದೆಯೆ ?

೧ನೆ:— ( ನಿಂತಲ್ಲಿಯೆ ) ಗೊತ್ತಿಲ್ಲದೆ ಪ್ರೇಮಪಾಶ ಆಗುವದೇನೊ ?

ಕಾಮಿ:— ( ಮೆಲ್ಲಗೆ ಕಣ್ಣು ತೆರೆಯುತ್ತ ) ಪ್ರೇಮಕ್ಕೆ ಗೊತ್ತಿಲ್ಲ,

ಗೊತ್ತಿಗೆ ಪ್ರೇಮವಿಲ್ಲ. ಪ್ರೇಮವೆ ಗೊತ್ತು, ಪ್ರೇಮವೆ ಸೊತ್ತು, ಪ್ರೇಮವೆ........ ( ತಡೆಯುವನು ).

೩ನೆ:— (ಪ್ರಾಸ ಕೊಡಿಸುವ ಹವಣಿಕೆಯಿಂದ) ಪ್ರೇಮವೆ ಶರ್ಯತ್ತು.

ಕಾಮಿ:— ( ಒಮ್ಮೆಲೆ ಆನಂದದಿಂದ ಮುಂದೆ ಬಂದು ) ಶರ್ಯತ್ತು ! ಅಹಹಾ, ಯೋಗ್ಯ ಶಬ್ದ. ಸದ್ಯದ ಸ್ಥಿತಿಯನ್ನು ಸಹೃದಯಂಗಮವಾಗಿ ಸಲ್ಲಿಸುವ ಶಬ್ದ. ( ನಿರಾಶೆಯಿಂದ ) ಈಗ ನಡೆದಿದೆ ಪ್ರೇಮದ ಶರ್ಯತ್ತು. ಈ ಶರ್ಯತ್ತಿನಲ್ಲಿ ನಾಯಕ ನಾನು.

೪ನೆ:— ನಾಯಿಕೆ?

ಕಾಮಿ:— ಮೋಹಿನಿ. ( ಎಲ್ಲರೂ ಆಶ್ಚರ್ಯದಿಂದ ಒಬ್ಬರೊಬ್ಬರನ್ನು ನೋಡುವರು ). ಆಶ್ಚರ್ಯವೇಕೆ ? ನಾಯಿಕೆಗೆ ಬೇಕಾಗುವ ಎಲ್ಲ ಗುಣಗಳು, ಅಕ್ಷರಶಃ, ಕಾವ್ಯದಲ್ಲಿ ವರ್ಣಿಸಿದಂತೆ, ಮೋಹಿನಿಯಲ್ಲಿಲ್ಲವೆ ? ನನ್ನನ್ನು ನೋಡಿದರೆ ಮುಖ ತಿರುಗಿಸುವಳು, ಅದು ನಾಚಿಕೆಯಲ್ಲವೆ ? ನನ್ನ ವಿಷಯ ಮಾತು ನಡೆದಲ್ಲಿ ಮುಖ ತಗ್ಗಿಸುವಳು, ಅದು ಅನುರಾಗವಲ್ಲವೆ ? ನಾನು ಸಭೆಗೆ ಹೋದರೆ ಅಲ್ಲಿಯೂ ಬರುವಳು, ಅದು ಧೈರ್ಯವಲ್ಲವೆ ? ತರುಣರೆ, ರಸಿಕರೆ, ( ಕಳಕಳಿಯಿಂದ ) ನನ್ನ ತರುಣ ಮತ್ತು ರಸಿಕ ಗೆಳೆಯರೆ, ನನ್ನ ಸ್ಥಿತಿ ಏನಾಗಿದೆ ? ನನ್ನ ಉಸಿರು ಕೈಗೆ ಬಿಸಿ ಹತ್ತುವದು, ಅದು ಪ್ರೇಮಜ್ವರವಲ್ಲವೆ ? ನನ್ನ ಎದೆಯು ಕೈ ಹಚ್ಚಿದರೆ ಹಾರುವದು, ಅದು ಅನುರಾಗದ ಹಂಬಲವಲ್ಲವೆ? ನನ್ನ ಪ್ರತಿಯೊಂದು ಕೆಲಸಕ್ಕೆ ವಿಘ್ನ ಬರುವವು, ಅದು ನಾನು ನಾಯಕನಾಗುವ ಯೋಗ್ಯತೆಯನ್ನು

ಸೂಚಿಸುವದಿಲ್ಲವೆ ? ( ಉಸುರ್ಗರೆದು ) ಹೆಜ್ಜೆಗೊಮ್ಮೆ ಒಲ ಗಣ್ಣು ಹಾರುವದು.

೪ನೆ:— ಇನ್ನೇನು ತಡ, ಅಕ್ಷತೆಗಳು ಹಾರಿದವೆಂದೇ ತಿಳಿ.

೨ನೆ:— ( ಸಿಟ್ಟಿನಿಂದ ) ಹೀಗೆ ರಸಭಂಗ ಮಾಡಬೇಡೋ ಸಡುವೆ ?

ಕಾಮಿ:— ( ವಿಷಾದದಿಂದ ) ಇನ್ನೆಲ್ಲಿಯು ರಸಭಂಗ? ಅದೆಂದಿಗೊ ಆಗಿ ಹೋಗಿದೆ. ನನ್ನ ಪ್ರೇಮರಾಜ್ಯದಲ್ಲಿ ಒಂಡುಗಾರ ಬಂದಿರುವ. ನನ್ನ ನಾಟಕದಲ್ಲಿ ಪ್ರತಿನಾಯಕನೊಬ್ಬ ನಿಂತಿರುವ.

೧ನೆ:— ( ಸಿಟ್ಟಿನಿಂದ ) ಯಾವನ ಯೋಗ್ಯತೆ ಇಂತಹ ರಸವನ್ನು ನೀರಸ ಮಾಡುವದು ?

ಕಾಮಿ:— ( ಗಂಭೀರವಾಗಿ ) ಬೇಕಾದಂತಹ ರಸವನ್ನು ನೀರಸ ಮಾಡುವ ಯೋಗ್ಯತೆಯುವನಾದ ಆ ಡಾಕ್ತರನು.

ಎಲ್ಲರು:— ( ಒಮ್ಮೆಲೆ ) ಯಾರು ? ವಿದ್ಯಾಧರನೆ ? ( ಕಾಮಿಯು ತಲೆ ದೂಗುವನು ).

೧ನೆ:— ( ತಿರಸ್ಕಾರದಿಂದ ) ಎರಡನೆಯು ಡಾಕ್ತರನಿಗೆ ತನ್ನ ಪ್ರಕೃತಿಯನ್ನು ತೋರಿಸಲಿ ಅವ.

ಕಾಮಿ:— ( ಸಮಾಧಾನದಿಂದ ) ಸಿಟ್ಟಿನ ಕಯ್ಯಲ್ಲಿ ಬುದ್ಧಿ ಕೊಟ್ಟು ಉಪಯೋಗವಿಲ್ಲ. ಪ್ರೇಮವು ಸಿಟ್ಟಿನ ವಿಷಯವಲ್ಲ. ಸಮಾಧಾನದಿಂದ, ಸಾಧಕ-ಬಾಧಕ ಪ್ರಮಾಣಗಳಿಂದ ಅದನ್ನು ಸಿದ್ಧ ಮಾಡಬೇಕಾಗುವದು.

೨ನೆ:— ನಿಜ. ನಿಜ. ಆ ಡಾಕ್ತರನು ತನ್ನ ಉಸಿರು ನೋಡಿಕೊಳ್ಳಲಿ ಬಿಸಿ ಇದೆಯೇನು ? ಎದೆಯನ್ನು ಮುಟ್ಟಿ ನೋಡಲಿ, ಹಾರುವದೇನು ? ಆ ಮೇಲೆ ಹೇಳಲಿ, ಮೋಹಿನಿಯ ಮೇಲೆ—

ಕಾಮಿ:— ( ನಿರಾಶೆಯಿಂದ ) ಅವನು ಹೇಳಿ ಉಪಯೋಗವೇನು ? ಮೋಹಿನಿಯನ್ನು ವಿದ್ಯಾಧರನಿಗೆ ಮದಿವೆ ಮಾಡಿಕೊಡ ಬೇಕೆಂದು ಮನೋರಮಾಬಾಯಿಯ ಹಟ.

೩ ನೆ:— ( ತಿರಸ್ಕಾರದಿಂದ ) ಅದರದೇನು ಬಿಸಾತು ? ಮೋಹಿನಿಯ ದೊಂದು ನಿನ್ನಲ್ಲಿ ಪ್ರೇಮವಿದ್ದರೆ—

ಕಾಮಿ:— ( ಅಸಮಾಧಾನದಿಂದ ) ಇದ್ದರೆ ! ಇದ್ದರೆ ! ಅದನ್ನು ಸಿದ್ಧ ಮಾಡಿ ತೋರಿಸುವದು ಹೇಗೆ ? ಸಾಧಕ–ಬಾಧಕ ಪ್ರಮಾಣಗಳಿಂದ ಸಿದ್ಧಮಾಡಿ ತೋರಿಸಲು ಪ್ರೇಮ ವೇನು ದೇವರೆ ಇಲ್ಲವೆ ತತ್ವಜ್ಞಾನವೆ ?

೪ ನೆ:— ( ತಿರಸ್ಕಾರದಿಂದ ) ತತ್ವಜ್ಞಾನವೇಕೆ ? ನನಗೆ ಗೊತ್ತಿದೆ ಯುಕ್ತಿ. ಈ ವಿದ್ಯಾಧರನೂ ಪ್ರೇಮದಂತೆಯೆ ಇರುವ; ಅಂದರೆ ಸಾಧಕ-ಬಾಧಕ ಪ್ರಮಾಣಗಳಿಂದ ಸಿದ್ಧ ಮಾಡಲು ಬರುವಂತಲೇ ಇಲ್ಲ. ಅವನ ತಂದೆ ಯಾರು, ತಾಯಿ ಎಲ್ಲಿಯಾಕೆ, ಎಂಬುದು ಯಾರಿಗೂ ಗೊತ್ತಿಲ್ಲ.

೩ ನೆ:— ( ವೇದಾಂತಿಯಂತೆ ) ಅಂದರೆ, ತರ್ಕಶಾಸ್ತ್ರದಿಂದ ವಿಚಾರಿಸಿ ದರೆ ವಿದ್ಯಾಧರನ ಅಸ್ತಿತ್ವವೆ ಇಲ್ಲವೆಂದು ಹೇಳಬಹು ದಲ್ಲವೆ ?

೨ ನೆ:— ಸಂಶಯವೇನು ?

೩ ನೆ:— ಹೆದರಿಕೆ ಯಾಕೆ ?

ಕಾಮಿ:— ( ಆಕಾಶದ ಕಡೆಗೆ ನೋಡುತ್ತ ) ನಡೆಯಿರಿ ಹಾಗಾದರೆ; ಚಂದ್ರನು ಉದಯನಾಗುವನು, ಅವನ ತಾಪವನ್ನು ಈ ಕಾಮಿಯು ಸಹಿಸನು. ( ಹೋಗುವನು ).

೪ ನೆ:— ( ಆಶ್ಚರ್ಯದಿಂದ ) ಕೃಷ್ಣಪಕ್ಷದಲ್ಲಿ ಮತ್ತೆಲ್ಲಿಯ ಚಂದ್ರ ಕಾಣಿಸಿದನೊ ಇವನಿಗೆ ?

೧ನೆ:— ( ಸಿಟ್ಟಿನಿಂದ ) ಮೋಹಿನಿಯ ಮುಖ ಚಂದ್ರ. ಇಷ್ಟು ತಿಳಿಯಬಾರದೆ ? ( ಹೋಗುವನು ).

೨ನೆ:— ( ನಗುತ್ತ ) ಹೇಗಿರುವ ಮಲ್ಲಿನಾಥ, ನೋಡಿದೆಯಾ ? ( ಹೋಗುವನು ).

೪ನೆ:— ಏನಾದರೂ ಅರ್ಥವಾಯಿತೊ ನಿನಗೆ ?

೩ನೆ:— ಆಗದೆ ಏನು ? ನಡೆ. ಒಬ್ಬನಿಗೆ ಪ್ರೇಮದಲ್ಲಿ ಹುಚ್ಚು, ಇಬ್ಬರಿಗೆ ಹುಚ್ಚನಲ್ಲಿ ಪ್ರೇಮ. ( ಇಬ್ಬರೂ ನಗುತ್ತ ಹೋಗುವರು ).



## ಪ್ರವೇಶ ೩

( ಅದೇ ದಿವಸ ಎರಡು-ಎರಡುವರೆ ತಾಸು ರಾತ್ರಿಯಾಗಿದೆ. ಹರಿಹರರಾಯನ ಮನೆಯಲ್ಲಿಯ ಕೂಡುವ ಕೋಣೆ. ತೆರೆಯು ಮೇಲೆ ಏರುತ್ತಿರುವಾಗ್ಗೆ ರಂಗಭೂಮಿಯ ಬಲಬದಿಗೆ ಎರಡು ಪಾದೆಗಳು, ತರುವಾಯ ಎರಡು ಕೈಗಳು ಕಾಣಬರುವವು. ಸ್ವಲ್ಪ ಲಕ್ಷ್ಯಪೂರ್ವಕವಾಗಿ ನೋಡಲು ಒಂದು ಹೆಂಗಸು ಮಂಚಾಸನದ ಮೇಲೆ ಕುಳಿತಿರುವಂತೆ ಕಾಣಬರುವದು. ಮಂಚಾಸನದ ಒಂದು ಬದಿಗೆ ಎರಡೂ ಕೈಗಳನ್ನಿಟ್ಟು, ಅವುಗಳಲ್ಲಿ ಮುಖವನ್ನು ಮುಚ್ಚಿಕೊಂಡಿರುವದರಿಂದ ಈ ಹೆಂಗಸು ಯಾರು ಎಂಬುದು ಪ್ರೇಕ್ಷಕರಿಗೆ ತಿಳಿದುಬರದಿದ್ದರೂ, ಅವಳು ಮನೋರಮೆಯೆಂದು ನಾವು ಹೇಳಬಲ್ಲೆವು. ನಡನಡುವೆ ಅವಳ ಭುಜಗಳೂ ಪಕ್ಕೆಗಳೂ ಒಮ್ಮೆಲೆ ಬೆದರಿದಂತೆ ಅಳುಕುತ್ತಿದ್ದುದರಿಂದ ಅವಳು ಬಿಕ್ಕುತ್ತಿರಬಹುದೆಂಬ ಊಹೆ. ಸದ್ಯಕ್ಕೆ ಅವಳ ಹೊರತು ಕೋಣೆಯಲ್ಲಿ ಯಾರೂ ಇಲ್ಲ; ಹಾಗೆ ವಿಚಾರ ಮಾಡಿ ನೋಡಿದಲ್ಲಿ ಮನೋರಮೆಯು ಕಣ್ಣು ತೆರೆದರೆ ಎದುರು ಕಾಣುವಂತೆ ಸುಂದರವಾದ ಪುಸ್ತಕಗಳ ಸಾಲು ಇದೆ. ಅದರ ಸಮೀಪಕ್ಕೆ ಒಂದು ಸಣ್ಣ ಮೇಜು, ಒಂದೆರಡು ಕುರ್ಚಿಗಳು ಇದ್ದು, ಆ ಮೇಜಿನ ಮೇಲೆ ಒಂದು ದೀಪವು ಸರಳ ಜನರ ಮನಸ್ಸಿನಂತೆ ಶಾಂತವಾಗಿಯೂ, ತಿಳುವಾಗಿಯೂ, ಎದ್ದು ಕಾಣುವಂತೆಯೂ ಉರಿಯುತ್ತಿದೆ. ಈ ದೀಪದ ಬೆಳಕಿನಲ್ಲಿ ಪ್ರೇಮಪರವಶಳಾದರೂ ವಿನಯವತಿಯಾದ ಕಾಮಿನಿಯ ಕಣ್ಣುಗಳಂತೆ, ತಮ್ಮ ನಲ್ಲರನ್ನು ಕರೆಯಲು ಹವಣಿಸುವವೊ ಏನೊ ಎನ್ನುವಂತೆ ಪುಸ್ತಕಗಳು ಮಿಂಚಿನ ದೃಷ್ಟಿಯನ್ನು ಸೆಳೆಯುವಂತಿವೆ. ಇಷ್ಟರಲ್ಲಿ ಮಂಚಾಸನ ಮತ್ತು ಪುಸ್ತಕಗಳ ಸಾಲಿನ ನಡುವಿನ, ಪ್ರೇಕ್ಷಕರ ಎದುರಿನ ಬಾಗಿಲಿನಿಂದ ಮೋಹಿನಿಯು ಬರುವಳು. ಬಂದವಳೇ ಪುಸ್ತಕಗಳನ್ನು ನೋಡುತ್ತ ನಿಂತುದರಿಂದ ತನ್ನ ತಾಯಿಯು ಕುಳಿತದ್ದು ಅವಳಿಗೆ ಕಾಣುವದಿಲ್ಲ. ಮನೋರಮೆಗೆ ಮಾತ್ರ ಕಾಲು ಸಪ್ಪಳ ಕೇಳಬಂದಿರಬಹುದು. ಅವಳು ಮೆಲ್ಲಗೆ ಮುಖವನ್ನು ಮೇಲೆ ಮಾಡಿ ಓರೆಗಣ್ಣಿನಿಂದ ನೋಡುವಳು. ಮೋಹಿನಿಯನ್ನು ನೋಡಿದಕೂಡಲೆ ಒಮ್ಮೆಲೆ ಕಣ್ಣೀರು ಒರಿಸಿಕೊಂಡು ಸರಿಯಾಗಿ ಕುಳಿತುಕೊಳ್ಳುವಳು. ಇಷ್ಟರಲ್ಲಿ ಗೊತ್ತಾಗುವ ಮುಂಚೆಯೆ – ದುಃಖದ ತಡೆಯಿಂದಲೊ ಏನೊ – ಕೆಮ್ಮು ಬರುವದು. ಮೋಹಿನಿಯು ಬೆದರಿ ತಿರುಗಿ ನಿಲ್ಲುವಳು. ಮೋಹಿನಿಯು ಬೆದರಿದ್ದನ್ನು ನೋಡಿದರೆ ಯಾರಿಗಾದರೂ ನಗೆ ಬರುವಂತಿದೆ. ಇದಲ್ಲದೆ ಮೋಹಿನಿಯು ತಾನು ಕೈಯ್ಯಲ್ಲಿ ಹಿಡಿದ ಪುಸ್ತಕದ ಸಲು

ವಾಗಿಯೂ ಬೆದರಿದಂತೆ ಕಾಣುವದು. ಇಲ್ಲವಾದರೆ ಅದನ್ನು ಮರೆಮಾಡಲು ಯಾಕೆ ಪ್ರಯತ್ನ ಮಾಡಬೇಕು ? ಏನೇ ಇರಲಿ, ಇದನ್ನೆಲ್ಲ ನೋಡಿ ನಸುನಕ್ಕು—)

ಮನೋರಮೆ:—ಏನೇ ಮೋಹಿನಿ, ಯಾವ ಪುಸ್ತಕವನ್ನು ಓದುವಿಯೆ ? ಮುಚ್ಚುವಿಯೇಕೆ ? (ಸುಳ್ಳು ಗಂಭೀರತೆಯಿಂದ) ನನಗೆ ಓದಲು ಬರುವದಿಲ್ಲೆಂದು, ಅಷ್ಟರಲ್ಲಿ ಓದಬಾರದ್ದನ್ನೆಲ್ಲ ಮೊದಲು ಓದಿಬಿಡುವಿಯಲ್ಲವೆ ?

ಮೋಹಿನಿ:— (ಹೆದರಿಕೆಯಿಂದ) ಇಲ್ಲವ್ಮಾ, ಇಲ್ಲವ್ಮಾ, ಇದು—ಅಪ್ಪನವರು ಸಭೆಯಲ್ಲಿ ಹೆಂಗಸರೆಲ್ಲ ಓದಬೇಕೆಂದು ಹೇಳಿದ್ದು.

ಮನೋರಮೆ:—(ಕೊಂಚ ಅಭಿಮಾನದ ಆತುರತೆಯಿಂದ) ಅವರೇ ಬರೆದಿರುವರೇನೆ ಅದನ್ನ ?

ಮೋಹಿನಿ:— ಇಲ್ಲ, ಬರೆದವರು ಯಾರೊ. ಅದರ ಹೆಸರು "ಮಕ್ಕಳ ಹಾರೈಕೆ"

ಮನೋರಮೆ:—(ಸಂಶಯದಿಂದ) ಮಕ್ಕಳ ಹಾರೈಕೆ ? ನೀನು—

ಮೋಹಿನಿ:— (ಹೆದರಿ, ನಾಚಿ, ಲಗಬಗೆಯಿಂದ) ಅಲ್ಲವ್ಮಾಲ್ಲ, ತಪ್ಪು ಹೇಳ್ದೆ. "ಮಕ್ಕಳ ಆರೈಕೆ"

ಮನೋರಮೆ:—(ಗಟ್ಟಿಯಾಗಿ ನಕ್ಕು) ಹುಚ್ಚೀ, ಇಲ್ಲಿ ಬಾ. ಮಕ್ಕಳ ಆರೈಕೆ ಪುಸ್ತಕದಿಂದೇನು ಕಲಿಯುವಿ ? ನೋಡಿದಿಯಿಲ್ಲೊ ! ಹೆಂಗಸರಿಗೆ ಓದಲು ಬಂದರೆ, ಮನೆಯ ಮಕ್ಕಳನ್ನು ಬಿಟ್ಟು, ಮಂದಿಯ—ಪುಸ್ತಕದ – ಮಕ್ಕಳ ಆರೈಕೆ ಮಾಡುವರು. ಮೋಹಿನೀ, ಇಲ್ಲಿ ಬಾ; ನನ್ನ ಹತ್ತಿರ ಬಾ, ನಿನ್ನ ಆರೈಕೆ (ಮುಗುಳು ನಗೆಯಿಂದ) ನಾನು ಮಾಡುವೆ ಬಾ. (ಎಂದು ಕೈನೀಡುವಳು. ಮೋಹಿನಿಯು ಹೆದರಿಕೆಯಿಂದ, ಸಂಶಯದಿಂದ, ನಾಚಿಕೆಯಿಂದ ಮಂಚಾಸನದಲ್ಲಿ ತಾಯಿಯ ಎಡಕ್ಕೆ ಕೊಡುವಳು. ಮನೋರಮೆಯು ಮೋಹಿನಿಯ

ಕಡೆಗೆ ಮುಖ ತಿರುವಿ ಬಲಗೈಯಿಂದ ತನ್ನ ಸೀರೆಯನ್ನು ಸರಿ ಮಾಡಿಕೊಂಡು, ಎಡಗೈಯಿಂದ ಮೋಹಿನಿಯ ಕೊದಲನ್ನು ಸರಿ ಮಾಡುತ್ತ—) ಮೋಹಿನಿ, ಮನಸ್ಸಿನಲ್ಲಿದ್ದದ್ದನ್ನೆಲ್ಲ ನನ್ನ ಮುಂದೆ ಹೇಳು; ಮನೆಯಲ್ಲಿ ಅವರಿಗೆ ಕೆಲಸ ಬಹಳ, ವೇಳೆ ಇರುವದಿಲ್ಲ. ಪುಸ್ತಕ ಓದಿ ಯಾಕೆ ಮನಸ್ಸನ್ನು ಕೆಣಕಿಕೊಳ್ಳುವಿ ?

ಮೋಹಿನಿ:— (ತಿಳಿಯದೆ ತಾಯಿಯ ಮುಖವನ್ನು ನೋಡುತ್ತ) ನನ್ನ ಮನಸ್ಸಿನಲ್ಲಿ ಏನೂ ಇಲ್ಲವಮ್ಮಾ !

ಮನೋರಮೆ:—(ಕಳಕಳಿಯಿಂದ) ಹುವ್ವು ಬಾಡಿದರೆ ಒಳ್ಳಗೆ ತಿಳಿಯುವದು. ಮನಸ್ಸಿನಲ್ಲಿ ಏನೂ ಇಲ್ಲ ಅನ್ನುವಿ; ಇಲ್ಲದ್ದನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳುವಿ. ನೀನೇ ನಿನ್ನ ಮನದ ಮೋಹಿನಿಯಾಗುವಿಯೇನೆ ?

ಮೋಹಿನಿ:— (ಸಂಶಯದಿಂದ) ನನ್ನ ಮನಸ್ಸಿಗೆ ಏನೂ ತಿಳಿಯುವದಿಲ್ಲವಮ್ಮಾ.

ಮನೋರಮೆ:—(ನಸುನಕ್ಕು) ಎಲ್ಲರಿಗೂ ಒಮ್ಮೆ ಹಾಗೆಯೆ ಆಗುವದಮ್ಮಾ. ಊಟದ ರುಚಿ ಹಸಿದವರಿಗೆ. ಮೋಹಿನೀ, ನೀನು ದೊಡ್ಡವಳಾದಿ.

ಮೋಹಿನಿ:— (ಮೊದಲಿನಂತೆ) ನನಗೆ ಏನೂ ಆಗಿಲ್ಲವಮ್ಮಾ !

ಮನೋರಮೆ:—ಹುಚ್ಚೀ, ಅದು ಹೆದರಿಕೊಳ್ಳುವ ಮಾತಲ್ಲ. ನಿನಗೆ ಆನಂದ, ನನಗೆ ಅಭಿಮಾನ. ನಿನ್ನ ಮನಸ್ಸು ದೊಡ್ಡದಾಗಿದೆ, ನಿನ್ನ ಬುದ್ಧಿಯೂ ದೊಡ್ಡದಾಗಿದೆ, ನಿನ್ನ ವಿಚಾರ—

ಮೋಹಿನಿ:— (ನಡುವೆಯೆ)ಸಾಕು ಬಿಡವಮ್ಮಾ, ಏನಾದರೊಂದು ಹೇಳುವಿ!

(ಎಂದು ನಾಚಿಕೆಯಿಂದ ಮುಖತಗ್ಗಿಸಿ ತಾಯಿಯ ಸೆರಗಿನ ತುದಿಯನ್ನು ಬಾಯಿಯಲ್ಲಿ ಹಿಡಿಯುವಳು).

ಮನೋರಮೆ:—(ಗಟ್ಟಿಯಾಗಿ ನಕ್ಕು) ನೋಡು, ಏನಾದರೊಂದು ಮಾಡುವಿ! ಮತ್ತೆ ನಾನು ಹೇಳಿದರೆ ಅಲ್ಲವೆಂದು ನನ್ನ ಸೆರಗನ್ನು ತಿನ್ನುವಿ. (ಮೋಹಿನಿಯು ಮತ್ತಿಷ್ಟು ನಾಚಿ ಸೆರಗಿನ ತುದಿಯನ್ನು ಬಿಟ್ಟು ಬಿಡುವಳು ಮನೋರಮೆಯು ಬಲಗೈಯಿಂದ ಅವಳ ಮುಖವನ್ನು ಮೇಲಕ್ಕೆತ್ತಿ) ನೋಡಿದಿಯೇನೆ! ನೀನು ನಾಚಿ ಕೆಳಗೆ ನೋಡಿದ್ದರಿಂದ ನನ್ನ ಉಟ್ಟ ಸೀರೆ ಸಹ ಕೆಂಪಗಾಗಿದೆ, ನಿನ್ನ ನಾಚುವಿಕೆಯಿಂದ!

ಮೋಹಿನಿ:— (ಸಿಟ್ಟಿನ ಸೋಗಿನಿಂದ) ತಡೆಯಲಾರದೆ ನಾಚಿಕೆ ಬಂದರೆ ಏನು ಮಾಡಬೇಕಮ್ಮಾ?

ಮನೋರಮೆ:—ನಾಚಿಕೆ ಬಿಟ್ಟು ಹೇಳಬೇಕಮ್ಮಾ. (ಉಸುರ್ಗರೆದು) ನನ್ನ ಮುಂದೆ ಹೇಳುವಿ ಯಾಕೆ ನೀನು?

ಮೋಹಿನಿ:- (ತಾಯಿಯನ್ನು ದಿಟ್ಟಿಸುತ್ತ) ನನಗೆ ಏನೂ ಹೇಳೋದಿಲ್ಲ—

ಮನೋರಮೆ:—(ನಿರಾಶೆಯ ಸೋಗಿನಿಂದ) ಇದ್ದಿಲ್ಲವೆಂದರೆ ಇಲ್ಲ; ವಿದ್ಯಾಧರನನ್ನು ನೋಡಿದ ಕೂಡಲೆ ನಾಚಿದಿ ಎಂದು—

ಮೋಹಿನಿ:— (ಗಟ್ಟಿಯಾಗಿ) ನಾಚಲಿಕ್ಕೆ ನಾನೇನು-(ಮುಂದೆ ಏನು ಹೇಳಬೇಕೆಂಬುದು ತಿಳಿಯಲಾರದೆ ಸಿಟ್ಟಿನ ಸೋಗು ತಾಳುವಳು).

ಮನೋರಮೆ:—(ನಗೆಯಿಂದ) ನೀನೇನು—ನಿನಗೆ ತಿಳಿದೇ ಇಲ್ಲವೆಂತ ಹೇಳಲಿಲ್ಲವೇನೆ ಇದೇ ನೀನು? (ಅವಳನ್ನು ಹತ್ತಿರ ಕರೆದುಕೊಂಡು ಗದ್ದವನ್ನು ಹಿಡಿದು) ನೀನು ಏನೂ ಹೇಳಬೇಡ; ನನಗೆ ಎಲ್ಲವೂ ತಿಳಿಯುವದು. ಅವರ ಮನಸ್ಸಿನಲ್ಲಿಯೂ ಇದೆ, ನನಗೂ ಬೇಕಾಗಿದೆ. ವಿದ್ಯಾಧರನು—

ಮೋಹಿನಿ:— (ಹಟದಿಂದ) ನನಗೆ ಮದಿವೆಯೆ ಬೇಡ.

ಮನೋರಮೆ:—(ಆಶ್ಚರ್ಯ ತೋರಿಸಿ) ಮದಿವೆ ಎಲ್ಲಿಯದು ! ಇದು ನೋಡೆ, ನಾನು ಮದಿವೆಯ ಮಾತನ್ನೆ ಆಡಿಲ್ಲ. (ಮೋಹಿನಿಯು ಮುಖ ತಗ್ಗಿಸುವಳು. ಅವಳ ಬೆನ್ನುಮೇಲೆ ಕೈಯ್ಯಿಟ್ಟು) ಹುಚ್ಚೀ, ನೀನೇ ಆ ವಿಚಾರವನ್ನು ನನ್ನ ತಲೆಯಲ್ಲಿ ಹಾಕಿದೆ ನೋಡು. (ವಿಚಾರ ಮಾಡುವ ನೋಗಿನಿಂದ "ಇದೇ ಇರಬಹುದೇನೆ !" ಎಂದು ಗದ್ದಕ್ಕೆ ಬೊಟ್ಟು ಇಟ್ಟು ವಿಚಾರ ಮಾಡುವವಳಂತೆ ಎದುರು ನೋಡುತ್ತ ಕುಳಿತುಕೊಳ್ಳುವಳು. ಮನೋರಮೆಯು ಒಮ್ಮೆಲೆ ನಕ್ಕು) ತಿಳಿಯಿತ್ತೆ, ತಿಳಿಯಿತು. ನನಗೇನು ತಿಳಿಯಬೇಕಮ್ಮಾ ಇದೆಲ್ಲ! ನನಗೆ ಇಂತಹ ಪ್ರಸಂಗ ಬಂದಿಲ್ಲ, ಅನುಭವ ತಿಳಿದಿಲ್ಲ. ಈಗ ಹೊಳೆಯಿತು ನೋಡೆ ನನಗೆ, ವಿದ್ಯಾಧರನು ದಿನಾಲು ನಮ್ಮ ಮನೆಗೆ ಯಾಕೆ ಬರುವನೆಂಬುದು. ಮಾತಾಡಿ ದದೆ, ನೋಡದೆ, ಅವನಿಗೆ ಸಮಾಧಾನವಿಲ್ಲ; ಅವನ ಜೊತೆಯಲ್ಲಿ ಸಭೆಗೆ ಹೋಗದೆ ಅವಳಿಗೆ ಸಮಾಧಾನವಿಲ್ಲ.

ಮೋಹಿನಿ:— (ಎದ್ದು ಸಿಟ್ಟಿನಿಂದ) ನಾನು ಸಭೆಗೆ ಕಾಮಿಯ ಕೂಡ ಹೋಗಿದ್ದೆ.

ಮನೋರಮೆ:—ಅಮ್ಮಯ್ಯ! ಕುರ್ಚಿಯ ಮೇಲೆ ಬರೆದಿಡಿಸಿದ ಹೆಸರು? ಅದೂ ಒಬ್ಬ ಕಾಮಿಯದೆ ಅಲ್ಲವೆ? (ಗಲ್ಲಗಲ್ಲ ಬಡೆದುಕೊಂಡು) ತಪ್ಪಾಯಿತು, ಒಡೆದು ಹೇಳಿದ್ದಕ್ಕೆ. (ಅವಳನ್ನು ಮತ್ತೆ ಹತ್ತಿರ ಕುಳ್ಳಿರಿಸಿ) ಸಿಟ್ಟು ಬೇಡ, ನೋಗು ಬೇಡ, ಸಮಾಧಾನದಿಂದ ಇದ್ದಿಯೆಂದರೆ ಎಲ್ಲವನ್ನೂ ಮಾಡಿಕೊಡುವೆ. ನಮ್ಮ ಮೋಹಿನಿಯು ಅಂಥ–ಇಂಥವಳಲ್ಲ. ಸಾವಿರ ವಿದ್ಯಾಧರರು ಸಾಗರ ಬೀಳುವರು ಅವಳ ಸಲುವಾಗಿ.

( ಮೋಹಿನಿಯು ಉತ್ತರ ಕೊಡಬೇಕೆನ್ನುವಷ್ಟರಲ್ಲಿ ಹರಿಹರರಾಯನು ಬರುವನು. ರಾಯರು ಊಟ ತೀರಿಸಿಕೊಂಡು ಬಂದಿರುವರೆಂದು ಅವರ ಪ್ರಸನ್ನ ಮುದ್ರೆಯೆ ಒಡೆದು ಹೇಳುವಂತಿದೆ. ಮನೋರಮಾ-ಮೋಹಿನಿಯರು ಪ್ರೇಮಪೂರ್ವಕವಾಗಿ ಮಾತನಾಡುತ್ತ ಕುಳಿತಿದ್ದನ್ನು ನೋಡಿ ಆನಂದಸಾಗರದ ತೆರೆಯಂತೆ ರಾಯರ ಮುಖವನ್ನು ಮುಗುಳುನಗೆಯು ಬೆಳಗುತ್ತ ಬರುವದು. ಸಣ್ಣ ಮೇಜಿನ ಹತ್ತಿರ ನಿಂತುಕೊಂಡು ಒಂದು ಕೈಯಿಂದ ಕಣ್ಣುಗಳನ್ನು ಮುಚ್ಚಿಕೊಂಡಂತೆ ಮಾಡಿ— )

ಹರಿಹರಃ— ತಾಯಿ — ಮಕ್ಕಳ ಮುದ್ದಾಟಕ್ಕೆ ನನ್ನ ದೃಷ್ಟಿ ತಗಲೀತು.

ಮನೋರಮೆಃ—( ನೋಡಿ ) ನಮ್ಮ ಮಾತು ಕೇಳಿಸಬಾರದೆಂದು ಕಣ್ಣು ಮುಚ್ಚಿಕೊಂಡರು ನೋಡೆ! ( ಮೋಹಿನಿಗೆ ) ಅಂತೇ ಅವರು ಹೆಸರಾದ ವಕೀಲರು, ಅಲ್ಲವೇನೆ ?

ಹರಿಹರಃ— ( ಕಣ್ಣು ತೆರೆದು ) ಮಾತನಾಡಿದವರು ಆ ಹೆಸರಾದ ವಕೀಲರ ಹೆಂಡಂದಿರಲ್ಲವೆ ? ಕೇಳುವದೇನು ? ( ಕುಳಿತುಕೊಳ್ಳುವನು ).

ಮೋಹಿನಿಃ— ( ಮನೋರಮೆಯು ನಾಚಿದ್ದನ್ನು ನೋಡಿ ) ತಡೆಯಲಾರದೆ ನಾಚಿಕೆ ಬಂದರೆ ಏನು ಮಾಡಬೇಕಮ್ಮಾ! ನಾಚಿಕೆ ಬಿಟ್ಟು ಹೇಳಬೇಕು, ಅಲ್ಲವೆ ?

ಮನೋರಮೆಃ—(ಸಿಟ್ಟಿನ ನೋಗಿನಿಂದ) ಮಾತನಾಡುವವರ ಮಗಳು ನೀನು;

ಹರಿಹರಃ— ( ನಗುತ್ತ ) ಮೊದಲು ಮಾತಿಗೆ ಮಾತು ಬೆಳೆದರಾಯಿತು. ಮುಂದೆ ಮಾತು ತಾನೇ ಮಾತನಾಡುವದು.

ಮೋಹಿನಿಃ— ( ಮುಂದೆ ಬಂದು ) ಅಪ್ಪಾ, ಹೆಂಗಸರು ಸ್ವತಂತ್ರರಾಗಬೇಕೆಂದು ಯಾವಾಗಲೂ ಹೇಳುವಿ—

ಮನೋರಮೆಃ— ಅದು ಮನೆಯೊಳಗಿನ ಮಾತಲ್ಲಮ್ಮಾ, ಹುಚ್ಚೀ.

ಹರಿಹರ:— ( ಹೆಂಡತಿಯ ಕಡೆಗೆ ನೋಡುತ್ತ ) ನಮ್ಮ ಮಾತು ನಮಗೆ ಮುಟ್ಟಿತು.

ಮೋಹಿನಿ:— ಹೆಂಗಸರು ಸ್ವತಂತ್ರರಾದರೆ ಏನು ಮಾಡಬೇಕು ?

ಹರಿಹರ:— ( ಗಂಭೀರತೆಯ ನೋಗಿನಿಂದ ) ಸ್ವತಂತ್ರರಾದರೆ ಮೊದಲು ನಿನ್ನ ಪ್ರಶ್ನೆಗೆ ಉತ್ತರ ಕೊಡಬೇಕು.

ಮೋಹಿನಿ:— ( ಹಟದಿಂದ ) ಇಲ್ಲ, ನೀವೇ ಉತ್ತರ ಕೊಡಬೇಕು, ಇಲ್ಲಿಯೆ ಉತ್ತರ ಕೊಡಬೇಕು.

ಮನೋರಮೆ:— ನಾನು ಹೇಳುವೆ ಕೇಳು. ಹೆಂಗಸರು ಪ್ರಶ್ನೆ ಕೇಳಲು ಸ್ವತಂತ್ರ, ಗಂಡಸರು ಉತ್ತರ ಕೊಡಲು ಸ್ವತಂತ್ರ.

ಹರಿಹರ:— ( ನಗುತ್ತ ) ಹೆಂಗಸೇ ಉತ್ತರ ಕೊಟ್ಟರೆ ಮಾತ್ರ ಗಂಡಸು ಪರತಂತ್ರ. ( ಮೋಹಿನಿಗೆ ) ಸ್ವತಂತ್ರ ಹೆಂಗಸು ಅಂದರೆ ನಮ್ಮನಿಮ್ಮಂತೆ ಬೇಕಾದ್ದನ್ನು ಮಾಡಬಲ್ಲಳು.

ಮೋಹಿನಿ:— ( ಸಂಶಯದಿಂದ ) ಅಂದರೆ ಮದಿವೆಯಾದರೂ ಇದ್ದ ಮನೆಯಲ್ಲಿಯೆ ಇರಲು ಸ್ವತಂತ್ರಳಲ್ಲವೆ ಹೆಂಗಸು ?

ಮನೋರಮೆ:— ಇದೇನು ಕೇಳುವಿಯೆ ಹುಚ್ಚು ವಿಚಾರ?

ಹರಿಹರ:— ಹುಚ್ಚು ವಿಚಾರ! ಅಲ್ಲ. ಎಲ್ಲರನ್ನೂ ಹುಚ್ಚು ಮಾಡುವ ವಿಚಾರ. ( ಎದ್ದು ನಿಂತು ) ಇದು ಎಲ್ಲರೂ ಮಾಡತಕ್ಕ ವಿಚಾರ. ಇದು ಎಲ್ಲರಿಗೂ ಬೇಕಾದ ವಿಚಾರ. ಈ ವಿಚಾರದಿಂದ ಸಮಾಜಕ್ಕೆ ಹಿತವಿದೆ. ಬಾಂಧವರೆ,—( ಮನೋರಮೆಯು ಖೊಳ್ಳೆಂದು ನಗುವಳು. ರಾಯರು ತಮ್ಮ ತಪ್ಪನ್ನು ಅರಿತು ಸುಳ್ಳು ನಗೆಯಿಂದ ) ರೂಢಿಯ ಸಾಮರ್ಥ್ಯ. ಛೆ ! ಮುಂಜಾವಿನಿಂದ ಸಂಜೆಯವರೆಗೆ ವ್ಯಾಖ್ಯಾನ ನಡೆಯಿಸಿ ಪ್ರತಿಯೊಂದು ಮುಹೂರ್ತಕ್ಕೆ ಜಾಹೀರ ವ್ಯಾಖ್ಯಾನ. ( ಮೋಹಿನಿಗೆ )ನೋಡಿದಿ ಇಲ್ಲೋ? ಇಷ್ಟರಲ್ಲಿ ನಿನ್ನ ಪ್ರಶ್ನವು

ನನಗೆ ಹೇಗೆ ಹುಚ್ಚು ಹಿಡಿಸಿತು! ( ಒಳಕ್ಕೆ ನೋಡಿ ) ಬಾಗಿಲ ಸಪ್ಪಳ. ( ಬೇಜಾರದಿಂದ ) ಮತ್ತೆ ಯಾವ ವಿಶ್ವಾಮಿತ್ರ ಬಂದನೋ? ಈ ಬಡಿದಾಡುವವರಿಗಂತೂ ಬೇಸರವಿಲ್ಲ, ವೇಳೆಯಿಲ್ಲ, ನಿಯಮವಿಲ್ಲ. ( ಮೋಹಿನಿಗೆ ) ನೋಡಿ ಬರುವೆ. ( ಹೋಗುತ್ತ ) ವಕೀಲರಿಗೂ ಕೂಡ ವೇಳೆ, ವಿಶ್ರಾಂತಿ ಇರುವವೆಂಬ ಕಲ್ಪನೆಯೆ ಇವರಿಗಿಲ್ಲ. (ಎಡಬದಿಯ ಬಾಗಿಲಿನಿಂದ ಹೋಗುವನು).

ಮೋಹಿನಿ:— ( ಜಂಬದಿಂದ ) ನಾನು ಕೇಳಿಯೆ ಬಿಡುವಾಕೆ.

ಮನೋರಮೆ:—ಅಲ್ಲೇ, ಹೀಗೆ ಎರಡನೆಯವರಿಗೆ ಕೇಳುತ್ತ ಹೋದೆಯೆಂದರೆ ನೀನು ಸ್ವತಂತ್ರಳಾಗುವದು ಹೇಗೆ?

ಮೋಹಿನಿ:— ( ಜಂಬದಿಂದಲೂ ಹಟದಿಂದಲೂ ) ನನ್ನ ಪ್ರಶ್ನಕ್ಕೆ ಉತ್ತರ ಕೊಡುವವರೆಗೆ ನಾನು ಯಾರು ಹೇಳಿದರೂ ಸ್ವತಂತ್ರಳಾಗುವದಿಲ್ಲ.

( "ಓಹೊ ಹೀಗೊ?" ಎಂದು ಮೋಹಿನಿಯು ಬಂದ ಬಾಗಿಲಿನಿಂದ ವಿದ್ಯಾಧರನು ಬರುವನು. ಮನೋರಮೆಯು ನಗುತ್ತ ಮೋಹಿನಿಗೆ "ಯಾರು ಹೇಳಿದರೂ?" ಎಂದು ಕೇಳುವಳು. ತಾನು ಹೊಸ ಪೇಚಾಟದಲ್ಲಿ ಸಿಕ್ಕಳೆಂದು ತಿಳಿದು ಮೋಹಿನಿಯು ತಂದೆ ಹೋದ ಬಾಗಿಲಿನಿಂದ ಹೋಗುವಳು. ವಿದ್ಯಾಧರನು ಬಾಗಿಲದವರೆಗೆ ಹೋಗಿ, ಮೋಹಿನಿಯು ಮರೆಯಾದಳೆಂದು ಮನವರಿಕೆ ಮಾಡಿಕೊಂಡು, ಮನೋರಮೆಗೆ ಎದುರಾಗಿ ಮೇಜಿನ ಮೇಲೆ ಕುಳಿತುಕೊಂಡು--- )

ವಿದ್ಯಾಧರ:— ಇದೇನು? ಮನೆಯಲ್ಲಿಯೂ ಸಭೆ ನೇರಿರುವದೇನು?

ಮನೋರಮೆ:— ಸಭೆಯೆಂದು ತಿಳಿದು ನೀನು ಬಂದಿದ್ದರೆ ತಿರುಗಿ ಹೋಗಬಹುದು. ( ಎದ್ದು ಆಕಳಿಕೆಯನ್ನು ಅಂಗೈಯಿಂದ ತಡೆಯುವವಳಂತೆ ) ಸಭೆ ಮುಗಿಯಿತು.

ವಿದ್ಯಾಧರ:— ಸಭೆ ಮುಗಿದರೇನು, ಸಂಗತಿ ಮುಗಿದಿಲ್ಲವಲ್ಲ.

ಮನೋರಮೆ:- -( ಬೇಜಾರದಿಂದ ) ನಿನ್ನ ಸಂಗತಿಯು ಮುಗಿಸಬೇಕೆಂದರೂ ಮುಗಿಯುವದಿಲ್ಲ. ವಿದ್ಯಾಧರಾ, ಎಷ್ಟು ಸಲ ಹೇಳಿ ಕೊಂಡಿರುವೆ; ಹೊತ್ತಿಲ್ಲದ ಹೊತ್ತಿನಲ್ಲಿ ಕೆಲಸವಿಲ್ಲದೆ ಬರಬೇಡೆಂದು. ಕೆಟ್ಟ ಮನಸಿನಂತೆ ಯಾವಾಗಲೂ ಕಾಡುವಿ.

ವಿದ್ಯಾಧರ:— ( ಆಶ್ಚರ್ಯದಿಂದ ) ನಾನು ಕಾಡುವೆನೆ? ಇಂದಿಗೆ ೮-೧೦ ದಿವಸಗಳಾದವು, ನನ್ನನ್ನು ಸಂಶಯದಲ್ಲಿ ಮುಳುಗಿಸಿ ರುವಿ. ನನಗೊಮ್ಮೆ ಸರಿಯಾದ ಮಾತು ಹೇಳಿ ಬಿಡು.

ಮನೋರಮೆ:—ಮಾತು ಬಿಡುವದೇ ಸರಿಯೆಂದು ಹೇಳುವೆ, ಆಯಿತೆ? ಸರಿಬಾರದ ಮಾತನ್ನು ಬಿಟ್ಟುಬಿಡು.

ವಿದ್ಯಾಧರ:— ( ತಿರಸ್ಕಾರದಿಂದ ) ನಿನ್ನ ಉಪದೇಶವನ್ನು ಸಾಕುಮಾಡು. ಮನೋರಮಾ, ನನ್ನ ಮನಸ್ಸಿನಲ್ಲಿದ್ದುದನ್ನು ಎಷ್ಟು ಒಡೆದು ಹೇಳಲಿ? ನಿನ್ನ ಹಿತದ ಸಲುವಾಗಿ ರಾಯರಿಗೆ ಔಷಧ ಕೊಡುವೆ; ನಿನ್ನ ಹಿತದ ಸಲುವಾಗಿ ನಿನಗೆ ಉಪ ಚಾರವನ್ನು ತೋರಿಸುವೆ; ನಿನ್ನ ಹಿತದ ಸಲುವಾಗಿ ನನ್ನ ಮಾನ ಮರ್ಯಾದೆಯನ್ನು ಬಿಟ್ಟು ನಿಮ್ಮ ಮಾನ-ಮರ್ಯಾದೆಯನ್ನು ಕಾಯ್ದುಕೊಳ್ಳಲು ಸಿದ್ಧನಿರುವೆ.

ಮನೋರಮೆ:—( ಅಣಕಿಸಿಂದ ) ದೊಡ್ಡವರ ಲಕ್ಷಣವೇ ಅದು.

ವಿದ್ಯಾಧರಃ— ( ಬೇಜಾರದಿಂದ ) ಹಾಳಾಗಲಿ ದೊಡ್ಡಿಸ್ತನ.

ಮನೋರಮೆಃ—ಅಷ್ಟೊಂದು ನೀನು ಉದಾಸೀನನಿದ್ದರೆ ನಿನ್ನಷ್ಟಕ್ಕೆ ಇರಬಾರದೆ? ಎರಡನೆಯವರ ದೊಡ್ಡಿಸ್ತನವನ್ನು ಯಾಕೆ ಹಾಳು ಮಾಡುವಿ?

ವಿದ್ಯಾಧರಃ— ನನ್ನದೆಲ್ಲಿ ಹಟವಿದೆ? ಆದರೆ ಎರಡನೆಯವರ ದೊಡ್ಡಿಸ್ತನ

ವನ್ನು ನಾಸು ಕೆಡಿಸಬಾರದೆಂದರೆ, ನನ್ನ ದೊಡ್ಡಿಸ್ತನ
ವನ್ನು ಎರಡನೆಯವರು ಕೆಡಿಸಬಾರದು. ಇದು ಮಾತ್ರ
ನನ್ನ ಹಟ.

ಮನೋರಮೆ:—ಕೊಡ ತುಂಬದೆ ಹಗ್ಗ ಸಳೆಯುವಿ. ನಿನ್ನ ದೊಡ್ಡಿಸ್ತನಕ್ಕೆ
ಅಡ್ಡ ಬಂದವರು ಯಾರು?

ವಿದ್ಯಾಧರ:— (ಮುಂದೆ ಬಂದು) ದೊಡ್ಡಿಸ್ತನ, ದೊಡ್ಡಿಸ್ತನ! ಇಷ್ಟೊಂದು
ಶಬ್ದದ ಆಡಂಬರವೇಕೆ? ಮನುಷ್ಯನಿಗೆ ತನ್ನ ಸುಖದ
ಮುಂದೆ ಬೇರೆ ದೊಡ್ಡಿಸ್ತನ ಇದೆಯೆ? ತನ್ನ ಸುಖಕ್ಕೆ
ಅಡ್ಡ ಬಂದವರನ್ನು, ತನ್ನ ಸುಖದ ಪ್ರವಾಹವನ್ನು
ಅಡ್ಡಗಟ್ಟಿದವರನ್ನು, ತನ್ನ ಸುಖದ ಸುಗ್ಗಿಗೆ ಬೆಂಕಿ ಹಚ್ಚಿ
ದವರನ್ನು, ಏನೆಂದು ತಿಳಿಯಬೇಕು? (**ಕಳಕಳಿಯಿಂದ**)
ಮನೋರಮಾ, ನನ್ನ ಹೃದಯ ಸಂಜೀವನಿಯನ್ನು
ತನ್ನ ಮನೆಯ ಹಿಂದಿನ ತೋಟದಲ್ಲಿ ಹಚ್ಚಿದ—

ಮನೋರಮೆ:—(ಗಂಭೀರವಾಗಿ) ವಿದ್ಯಾಧರಾ, ಕೇವಲ ಡಾಕ್ತರನೆಂದು
ಈ ಮನೆಯಲ್ಲಿ ಬಂದಿರುವಿ; ಡಾಕ್ತರನಂತೆಯೆ ಮಾತ
ನಾಡಬೇಕಾಗುವದು.

ವಿದ್ಯಾಧರ:— (ನಗೆಯಿಂದ) ಸಂಜೀವನಿಯು ಔಷಧ; ತನ್ನ ಉಪ
ಯೋಗ–ಉಪಚಾರ ಬಲ್ಲ ಡಾಕ್ತರನಲ್ಲಿಯೆ ಅದು ಇರ
ಬೇಕಲ್ಲವೆ? (ಮುಂದೆ ಬಂದು, **ಕಳಕಳಿಯಿಂದ**) ಮನೋ
ರಮಾ, ಕ್ಷಮಿಸು ನನ್ನನ್ನು. ಆದರೆ-ಆದರೆ-ಆ ಸಂಜೀ
ವನಿಯನ್ನು ನನಗೆ ಒಪ್ಪಿಸದಿದ್ದರೆ ನನ್ನಲ್ಲಿಯ ವಿಷದ
ಔಷಧಗಳನ್ನು ಉಪಯೋಗಿಸಬೇಕಾಗುವದು. (ಮತ್ತೆ
ಮುಂದೆ ಬಂದು) ಮನೋರಮಾ, ನನ್ನಲ್ಲಿ ವಿಶ್ವಾಸವಿಲ್ಲವೆ?
ನಿಮ್ಮ ಮನೆತನದ ಮಾನ–ಮರ್ಯಾದೆಯನ್ನು ಮುಷ್ಟಿ

ಯಲ್ಲಿ ಮುಚ್ಚಿಕೊಂಡು ನಿಂತಿರುವೆ, ನನ್ನಲ್ಲಿ ವಿಶ್ವಾಸ ವಿಲ್ಲವೆ? ಅಥವಾ, ನನ್ನ ಮೇಲೆ ವಿಶ್ವಾಸವಿಲ್ಲದಿದ್ದರೆ ನಿನ್ನನ್ನೇ ಕೇಳಿಕೋ. ಬಾಲ್ಯದ ನಿನ್ನ ಅನುಭವದ ಆಣೆ ಹಾಕಿ ಕೇಳಿಕೋ ನಿನ್ನ ಹೃದಯವನ್ನು! ತಿಳಿದುಕೊಂತ ವಿಚಾರಗಳ ಆಣೆ ಹಾಕಿ ಕೇಳಿಕೋ ನಿನ್ನ ಹೃದಯವನ್ನು! ನಿನ್ನ ಹೃದಯದ ಆಣೆ ಹಾಕಿ ನಿನ್ನ ತಂದೆಯ ಮಗಳಾದ ಮನೋರಮೆಯನ್ನೇ ಕೇಳಿಕೋ! ಅಥವಾ, ಹರಿಹರ ರಾಯನ ಹೆಂಡತಿಯಾದೆಯೆಂದು ನಿನ್ನ ಮೇಲಿನ ನಿನ್ನ ವಿಶ್ವಾಸವೇ ಹಾರಿಹೋಯಿತೆ? (ಮನೋರಮೆಯು ಕೆಳಗೆ ನೋಡುತ್ತ ನಿಲ್ಲುವಳು. ವಿದ್ಯಾಧರನು ಮುಂದೆ ಹೋಗಿ ಎಡಗೈ ಯಿಂದ ಅವಳ ಕೈ ಹಿಡಿಯುವನು. ಅವಳು ಬೆದರಿದಂತೆ ಹಿಂದೆ ಸರಿಯುವಳು. ವಿದ್ಯಾಧರನು ಅವಳ ಕೈ ಬಿಡದೆ) ಯಾಕೆ? ಮೊದ ಲಿನ ಮನೋರಮೆಯು ಇಲ್ಲದಂತೆಯೆ ಆದಳೆ? ವಿದ್ಯಾ ಧರನ ಮೋಹದ ಮನೋರಮೆಯು ಮಾಯವಾಗಿಯೆ ಹೋದಳೆ? ಇದು ನೋಡು, ಮನೋರಮಾ, (ಬಲ ಮುಷ್ಟಿಯನ್ನು ತೋರಿಸಿ) ಇದರಲ್ಲಿ ಒಂದು ಜೀವವು ಅಡಗಿ ಕುಳಿತಿದೆ. (ಅವಳ ಕೈ ಬಿಡದೆ ಎಡಗಯ್ಯನ್ನು ಕುರಿತು) ಇದ ರಲ್ಲಿ ಇನ್ನೊಂದು ಜೀವವು ಅಡಕವಾಗಿ ಕುಳಿತಿದೆ. ಕೈ ಬಿಟ್ಟರೆ ಒಂದು ಜೀವ ಉಳಿಯುವದು; ಕೈ ಹಿಡಿದರೆ ಇನ್ನೊಂದು ಜೀವ ಉಳಿಯುವದು. ಹೇಳು, ಮಾತ ನಾಡು. ನಿನ್ನ ಮೋಹದಿಂದ ಆಕರ್ಷಿತವಾಗಿ ಇವೆರಡು ಜೀವಗಳು, ಎರಡು ಗ್ರಹಗಳಂತೆ, ನಿನ್ನ ಸುತ್ತಲೂ ಕುಣಿಯುತ್ತಲಿವೆ. ಒಂದನ್ನು ಕರೆದರೆ ಇನ್ನೊಂದು ಕಳಚುವದು. ಹೇಳು, ಮಾತನಾಡು. ಯಾವದು ಕಳಚು

ವದು ? ಯಾವದು ಕುಣಿಯುವದು ? ( ಮನೋರಮೆಯು ಮುಖ ತಗ್ಗಿಸಿ ನಿಲ್ಲುವಳು. ವಿದ್ಯಾಧರನು ಅವಳ ಕಡೆಗೆಯೆ ನೋಡುವನು. ಇಷ್ಟರಲ್ಲಿ ಎಡಬದಿಯ ಬಾಗಿಲಿನಿಂದ ಒಂದು ಕೈಯ್ಯಿಂದ ಕಣ್ಣು ಮುಚ್ಚಿಕೊಂಡು ನಗೆಮೊಗದಿಂದ ಮೆಲ್ಲಗೆ ಹೆಜ್ಜೆ ಇಡುತ್ತ ಹರಿಹರರಾಯನು ಬರುವನು ).

ಹರಿಹರ:— ( ಕಣ್ಣು ಮುಚ್ಚಿಯೆ ) ತಾಯಿಮಗಳ ಮುದ್ದಾಟ ಮುಗಿದಿಲ್ಲವೆ ? ನಾನು ಕಣ್ಣು ತೆರೆಯುವೆ ನೋಡಿ ( ಎಂದು ಕಣ್ಣು ತೆರೆಯಲು ಮೇಲೆ ಹೇಳಿದಂತೆ ನಿಂತ ವಿದ್ಯಾಧರ-ಮನೋರಮೆಯರನ್ನು ನೋಡಿ “ ಎಲ, ಇದೇನು ! ” ಎಂದು ಬೆಪ್ಪಾಗಿ ನಿಲ್ಲುವನು. ಮನೋರಮೆಯು ಒಮ್ಮೆಲೆ ಎಚ್ಚತ್ತವಳಂತೆ ಕೈ ಬಿಡಿಸಿಕೊಳ್ಳುವಳು. ವಿದ್ಯಾಧರನು ಮಾತ್ರ ನಿಂತಲ್ಲಿಯೆ ಯಾವದನ್ನೂ ಅರಿಯದವನಂತೆ-)

ವಿದ್ಯಾಧರ:— ( ಮನೋರಮೆಗೆ ) ನಿಮ್ಮ ಮನಸ್ಸಿಗೆ ಏನೂ ಆಗಿಲ್ಲ, ನೀವು ಸುಮ್ಮ ಸುಮ್ಮನೆ ಹೆದರುವಿರಿ. ( ಎಂದು ಮುಖ ತಿರುವಿ ಹರಿಹರರಾಯನನ್ನು ನೋಡಿ) ಓಹೊ,ಯೋಗ್ಯ ವೇಳೆಗೆ ಬಂದಿರಿ. ಇವರ ಮನಸ್ಸಿಗೆ ಔಷಧ ಕೊಡಬೇಕೆಂದು ಹೇಳಲಿಲ್ಲವೆ ನೀವು ? ಅದಕ್ಕಾಗಿ ೮–೧೦ ದಿವಸ ಪರೀಕ್ಷೆ ನಡೆಯಿಸಿರುವೆ. ಇನ್ನೂ ನಿರ್ಣಯವಾಗಲಿಲ್ಲ.

ಹರಿಹರ:— ಆಗಲಿ. ( ಸುಳ್ಳು ನಗೆಯಿಂದ ) ನಾನು ಇಲ್ಲಿ ನಿಂತರೆ ಅವಳಿಗೆ ಮನಸ್ಸು ಬಿಚ್ಚಿಡಲಿಕ್ಕೆ ಸಂಕೋಚವೆನಿಸಬಹುದು. ಆಗಲಿ. ( ಎಂದು ಹೋಗಿ, ತಿರುಗಿ ನಿಂತು ) ವಿದ್ಯಾಧರಾ, ಉಪಚಾರದ ಸಲುವಾಗಿ ಕೇಳಬೇಕಾಗಿದೆ. ಹೋಗುವಾಗ್ಗೆ ನನ್ನ ಕೋಣೆಗೆ ಬಂದು ಹೋಗು. (ಹೋಗುವನು).

ಮನೋರಮೆ:—( ದೈನ್ಯದಿಂದ ) ವಿದ್ಯಾಧರಾ, ನನ್ನ ಮನಸ್ಸಿನ ಪರೀಕ್ಷೆ ಮಾಡಿದಿ. ಹೋಗಬಾರದೆ ಇನ್ನು ? ನಿನ್ನ ನಿರ್ಣಯ ಬೇಕಾದಾಗ್ಗೆ—

ವಿದ್ಯಾಧರ:— ನಿರ್ಣಯ ನನ್ನದಲ್ಲ, ನಿನ್ನದು.

ಮನೋರಮೆ:—(ಸಿಟ್ಟಿನಿಂದ) ನನ್ನ ನಿರ್ಣಯವೇ ಬೇಕಾಗಿದ್ದರೆ ಹೇಳುವೆ. ಈ ಮನೆಯನ್ನು ಬಿಟ್ಟು ಹೋಗು.

ವಿದ್ಯಾಧರ:— (ನಮ್ರತೆಯನ್ನು ತೋರಿಸಿ) ತಮ್ಮ ಇಚ್ಛೆ. ಆದರೆ ನಾನು ಹೋದ ಮೇಲೆ ಈ ಮನೆಯು ಉಳಿಯುವದೇನೊ ಸಂಶಯವಿದೆ. (ಹೊರಡುವನು).

ಮನೋರಮೆ:—(ಒಮ್ಮೆಲೆ ಅಡ್ಡ ಬಂದು, ಕಣ್ಣೀರು ತಂದು) ತಡೆ, ವಿದ್ಯಾಧರಾ, ತಡೆ. (ಅವನನ್ನು ದಿಟ್ಟಿಸುತ್ತ) ನಿನ್ನ ಇಚ್ಛೆ, ನಿನ್ನ........ (ಒಮ್ಮೆಲೆ ಮಂಚಾಸನದ ಮೇಲೆ ಕುಳಿತುಕೊಂಡು) ಅಯ್ಯೋ, ನಾನು ಪಾಪಿ. ನಾನು ಹೇಡಿ. (ಎಂದು ಮುಖ ಮುಚ್ಚಿ ಕೊಳ್ಳುವಳು).

ವಿದ್ಯಾಧರ:— ನಾಳಿನವರೆಗೆ ಪಾಪ ತಡೆಯುವ ಧೈರ್ಯ ಮಾಡು; ಅಂದರೆ ನನ್ನ ಇಚ್ಛೆಯನ್ನು ತಿಳುಹಿಸುವೆ. (ಹೋಗುವನು. ಕಾಲು ಸಪ್ಪಳ ಕೇಳಿ ಮನೋರಮೆಯು ಮುಖವನ್ನು ಮೇಲಕ್ಕೆತ್ತಿ ಅವನು ಹೋದದ್ದನ್ನು ನೋಡಿ ಮತ್ತೆ ಮುಖ ಮುಚ್ಚಿಕೊಂಡು ಗಟ್ಟಿಯಾಗಿ ಬಿಕ್ಕುವಳು).

(ತೆರೆ)

## ಎರಡನೆಯ ಅಂಕು ಮುಗಿದುದು.



# ಮೂರನೆಯ ಅಂಕು

## ಪ್ರವೇಶ ೧

(ಮರುದಿವಸ ಮುಂಜಾವಿನ ಎರಡು ತಾಸು ಹೊತ್ತೇರಿದೆ. ತಿಮ್ಮಾಜಿಯ ಮನೆಯ ಮುಂದೆ. ತಿಮ್ಮಾಜಿಯು ರಾಯರ ಕಡೆಗೆ ಹೋಗುವವನಿರಬಹುದೆಂಬುದು ಅವನ ವೇಷದಿಂದ ತಿಳಿದು ಬರುವದು. ಆದರೆ ತಿಮ್ಮಾಜಿಯು ಕೂಡ ಮಾತನಾಡುತ್ತಿರುವ ಇನ್ನೊಂದು ವ್ಯಕ್ತಿಯು ಯಾರಾಗಿರಬಹುದು ? ಮೈಮೇಲೆ ಹರಕುಬಟ್ಟೆಗಳಿದ್ದರೂ ಮುಖಚರ್ಯೆಯಿಂದೇನು ಸಾಮಾನ್ಯ ಮನುಷ್ಯನೆಂದು ಕಂಡು ಬರುವದಿಲ್ಲ. ಏನೇ ಇರಲಿ. ಎರಡನೆಯವರ ಕೂಡ ಮಾತನಾಡುವಾಗ್ಗೆ ನಾವಾದರೂ ಯಾಕೆ ನಡುವೆ ಬಾಯಿಹಾಕಿ ಅಪ್ರಾಸಂಗಿಕ ಪ್ರಶ್ನವನ್ನು ಕೇಳುವದು ?)

ತಿಮ್ಮಾಜಿ:— (ವಿಚಾರಿಸಿ ಎದುರು ನಿಂತು) ತಮ್ಮ ಹೆಸರು ಏನೆಂದಿರಿ ?

ವ್ಯಕ್ತಿ:— (ಮುಗುಳು ನಗೆಯಿಂದ) ನಾರದ.

ತಿಮ್ಮಾಜಿ:— (ಆಶ್ಚರ್ಯದಿಂದ ದಿಟ್ಟಿಸುತ್ತ) ನಾ—ರ—ದ !

ವ್ಯಕ್ತಿ:— (ತಲೆದೂಗುತ್ತ) ಅಹುದು, ಕಲಿಯುಗದ ನಾರದ. (ಗಂಭೀರವಾಗಿ) ಇದಲ್ಲದೆ ಭೂಲೋಕದ ಚಿತ್ರಗುಪ್ತ. ಸದ್ಯಕ್ಕೆ ದೇವಲೋಕದಲ್ಲಿ ಕೂಡ ಹಣದ ಕೊರತೆಯಿದ್ದುದರಿಂದ ಎರಡೂ ಅಧಿಕಾರಗಳನ್ನು ಒಬ್ಬನಿಗೇ ಒಪ್ಪಿಸಿ ಬಿಟ್ಟಿದ್ದಾರೆ.

ತಿಮ್ಮಾಜಿ:— (ಸಂಶಯದಿಂದ) ಇದನ್ನು ನಾನು ನಿಜವೆಂದು ನಂಬಬೇಕೆ?

ವ್ಯಕ್ತಿ:— ನಂಬಿಗೆಯಾದ ಮೇಲೆ ನಿಜವೆನ್ನಿರಿ. ಆದರೆ ಮೊದಲು ನಾನು ಹೇಳುವದನ್ನಿಷ್ಟು ಕೇಳಿರಿ. ನಾನು ನಾರದ ಯಾಕೆ ಗೊತ್ತಿದೆಯೆ ?

ತಿಮ್ಮಾಜಿ:— ಬಾಲ್ಯದಿಂದ ಬ್ರಹ್ಮಚರ್ಯೆ ಪಾಲಿಸಿದಿರೆಂದೊ ?

ವ್ಯಕ್ತಿ:— ಅಷ್ಟೊಂದಕ್ಕೆ ನಾರದನಾಗುತ್ತಿದ್ದರೆ ಜಗತ್ತೆಲ್ಲ ನಾರದ-

ನೀರದರಿಂದ ತುಂಬಿ ಹೋಗುತ್ತಿತ್ತು. ಮದಿವೆಯಾಗದ ಮಕ್ಕಳೆಲ್ಲ ನಾರದರಾಗುತ್ತಿದ್ದರು. ನೀವು ಪುರಾಣದಲ್ಲಿ ಕೇಳಿಲ್ಲವೆ ?

ತಿಮ್ಮಾಜಿ:— ( ಬೇಜಾರವಾಗಿ ) ಇದು ಪುರಾಣ ಕೇಳುವ ಹೊತ್ತೂ ಅಲ್ಲ, ಪುರಾಣ ಹೇಳುವ ಜಾಗೆಯೂ ಅಲ್ಲ. (ಹೊರಡುವನು).

ವ್ಯಕ್ತಿ:— ತಡೆಯಿರಿ, ತಡೆಯಿರಿ. ( ತಿಮ್ಮಾಜಿಯು ಮತ್ತೆ ನಿಲ್ಲುವನು ). ಪುರಾಣ ಹೇಳುವದು ನಾರದನ ಕೆಲಸವಲ್ಲ. ದೇಶ ದೇಶಾಂತರ ಸಂಚಾರ ಮಾಡಿ, ಕೆಲಸ ಮಾಡದೆ ಹಾಡಿ ಹೊತ್ತು ಕಳೆಯುವ ಸುಖವಸ್ತು ನಾರದ. ನಾನು ಎಲ್ಲ ಕಡೆಯಲ್ಲಿಯೂ ತಿರುಗಿದವನು, ಕೆಲಸ ಮಾಡದೆ ತಿರುಗಿ ಬಂದವನು, ಹೋದಹೋದಲ್ಲಿ ಹಾಡಿ ಹೊತ್ತು ಕಳೆಯುವವನು.

ತಿಮ್ಮಾಜಿ:— ( ನಗುತ್ತ ) ಇದು ಮಾತ್ರ ವಿಶ್ವಾಸ ಕೂಡುವಂತಹ ಮಾತು.

ವ್ಯಕ್ತಿ:— ( ಉಸುರ್ಗರೆದು ) ವಿಶ್ವಾಸವು ಸಹ ಕೂಡುವದಲ್ಲವೆ ? ಆದರೆ ಈ ಕಲಿಯುಗದ ನಾರದನಿಗೆ ಅಷ್ಟೊಂದು ವೇಳೆ ಯೆಲ್ಲಿ ? ಅಷ್ಟೊಂದು ವಿಶ್ರಾಂತಿಯು ಸುದೈವವೆಲ್ಲಿ ? ರಾಯರೆ, ನಾನು ಚಿತ್ರಗುಪ್ತನೆಂದು ಕೂಡ ಹೇಳಲಿಲ್ಲವೆ?

ತಿಮ್ಮಾಜಿ:— ಇದರಲ್ಲಿ ಏನಾದರೊಂದು ವಿಚಿತ್ರವಾದ ಗುಪ್ತವಿರ ಬೇಕು !

ವ್ಯಕ್ತಿ:— ಆದರೂ ಏನೂ ಗುಪ್ತವಿಲ್ಲೆಂಬುದೇ ವಿಚಿತ್ರವಲ್ಲವೆ ? ಹೇಳುವೆ ಕೇಳಿ. ಯಮಲೋಕದ ಚಿತ್ರಗುಪ್ತನು ಎರ ಡನೆಯವರ ಜನನ ಮರಣಗಳನ್ನು ಬರೆಯುವನಂತೆ. ಆದರೆ ( ವಿಷಾದದಿಂದ ) ಭೂಲೋಕದ ಈ ಚಿತ್ರಗುಪ್ತನು

ತನ್ನ ಮರಣದವರೆಗೆ ಎರಡನೆಯವರ ಜನನ ಬರೆಯು ವನು.

ತಿಮ್ಮಾಜಿ:- ( ತಿಳಿದವನಂತೆ ) ಓಹೊ, ಮೊದಲೇ ಹೇಳಬಾರದಾಗಿತ್ತೆ? ಜನ್ಮಪತ್ರಿಕೆ ಬರೆಯುವ ಅಧಿಕಾರಿಗಳಲ್ಲವೆ ನೀವು ?

ವ್ಯಕ್ತಿ:— ಅಲ್ಲ, ಬರೆದ ಜನ್ಮ–ಪತ್ರಿಕೆಗಳ ಅಧಿಕಾರ ನನ್ನದು.

ತಿಮ್ಮಾಜಿ:— ಏನೇ ಇರಲಿ, ನನ್ನ ಹಣೆ-ಬರಹ ಬರೆಯುವವರಂತೆ ಕಾಣುವಿರಿ. ನನಗೆ ವೇಳೆಯಿಲ್ಲ, ಕ್ಷಮಿಸಿರಿ. ನೀವು ಹೇಳುವದು ಅಷ್ಟೊಂದು........ ಏನೇ ಇರಲಿ, ಅದರ ಕತೆ ಇಲ್ಲವೆ ನಾಟಕ ಬರೆಯಿರಿ. ( ಹೊರಡುವನು ).

ವ್ಯಕ್ತಿ:— (ಕೈಮುಗಿದು) ಈ ಸೂಚನೆಗಾಗಿ ನಿಮಗೆ ಆಭಾರಿಯಿರುವೆ. ಆದರೆ ನನ್ನ ಹೆಸರು ? ಅದನ್ನು ಕೇಳದೆಯೆ ಹೊರಟಿರಲ್ಲ!

ತಿಮ್ಮಾಜಿ:— ( ತಿರುಗಿ ನಿಂತು ) ಬಗಟು ಹಾಕಿ ಹೆಸರು ಕೇಳುವ ರೂಢಿ ನನಗೆ ಮರೆತಿದೆ. ಅದಕ್ಕಾಗಿಯೆ ಬರೆಯಿರಿ ಎಂದು ಹೇಳಿದೆ.

ವ್ಯಕ್ತಿ:— (ಆನಂದದಿಂದ) ಆಹಾ, ಬರೆಯಲು ನನಗೆ ಎಷ್ಟು ಅಧಿ ಕಾರ ! ಎಂತಹ ನನ್ನ ಯೋಗ್ಯತೆ ! ಏನು ನನ್ನ ಅನು ಭವ ! ಎಷ್ಟು ನನ್ನ ಪ್ರವಾಸ ! ನಮ್ಮ ದೇಶದಲ್ಲಿ ಪ್ರಾಂತಗಳೆಷ್ಟು, ಭಾಷೆಗಳೆಷ್ಟು, ಜಾತಿಗೋತ್ರಗ ಳೆಷ್ಟು; ಜನಸಂಖ್ಯೆ, ಗಂಡಸರ ಸಂಖ್ಯೆ, ಹೆಂಗಸರ ಸಂಖ್ಯೆ; ಎಲ್ಲವೂ ನನಗೆ ಗೊತ್ತಿದೆ. ( ಅಭಿಮಾನದಿಂದ ) ಗಂಡಸರಲ್ಲಿ ಮದಿವೆ ಆದವರು ಎಷ್ಟು, ಮದಿವೆ ಆಗದ ವರು ಎಷ್ಟು, ಮದಿವೆ ಆಗದಿದ್ದರೂ ಕೂಡ ಎಷ್ಟು ಜನರು ಗಂಡಸರು; ಯಾವ ದೇಶದಲ್ಲಿ ಯಾವ ಆಟ, ಯಾವ ಪ್ರಾಂತದಲ್ಲಿ ಯಾವ ವ್ಯಸನ, ಯಾವ ಸಮಾಜ

ದಲ್ಲಿ ಯಾವ ರೋಗ, ಯಾವ ಜಾತಿಯಲ್ಲಿ ಯಾವ ಅನಾಚಾರ—

**ತಿಮ್ಮಾಜಿ:—** (ಬೇಜಾರದಿಂದ ಹಣೆ ಬಡೆದುಕೊಳ್ಳುತ್ತ) ಮನುಷ್ಯ ಜಾತಿಯಲ್ಲಿ ಇದೊಂದು ಅನಾಚಾರ, ಇದೊಂದು ಅನಾಹುತಿ. (ಕೊಂಚ ಕೋಪದಿಂದ) ಎಲ್ಲಿಯಾದರೂ ಸಭೆಯಲ್ಲಿ ಮಾತನಾಡುವವನು ನೀನು, ವ್ಯವಹಾರದಲ್ಲಿ ಅಲ್ಲ.

**ವ್ಯಕ್ತಿ:—** (ದೈನ್ಯದಿಂದ) ಮಹಾರಾಯಾ, ಯಾಕೆ ನನ್ನ ಮೇಲೆ ಕೋಪಿಸಿಕೊಳ್ಳುವಿ ? ನೋಡಿ ನೋಡಿ ನನ್ನ ಕಣ್ಣುಗಳು ಕುರುಡಾಗಿವೆ, ಕೇಳಿ ಕೇಳಿ ನನ್ನ ಕಿವಿಗಳು ಗಡುಚಾಗಿವೆ, ಬೇಡಿ ಬೇಡಿ ನನ್ನ ನಾಲಗೆ ಉದ್ದವಾಗಿದೆ.

**ತಿಮ್ಮಾಜಿ:—** (ಆಶ್ಚರ್ಯದಿಂದ) ಅದೇನು ಸಂಬಂಧ ! (ಬೇಜಾರದಿಂದ ) ಹೇಳಿ ಹೇಳಿ ನನ್ನ ನಾಲಗೆ ಗಡುಚಾಗಿದೆ, ಕೇಳಿ ಕೇಳಿ ನನ್ನ ಕಿವಿ ಉದ್ದವಾಗಬಹುದು. ದಯಮಾಡಿ. (ಹೊರಡುವನು).

**ವ್ಯಕ್ತಿ:—** ನ–ನ್ನ ಹೆ–ಸ–ರು– ( ತಿಮ್ಮಾಜಿಯು ತಿರುಗಿ ನಿಲ್ಲುವನು ). ನನ್ನ ಹೆಸರು ಈ ಅನೇಕ ಬಿರುದಾಂಕಿತ ಉಭಯ–ಲೋಕ–ವಿಶಾರದ ಅಪ್ಪಾಜಿ.

**ತಿಮ್ಮಾಜಿ:—** (ತಿರಸ್ಕಾರದಿಂದ) ಇಷ್ಟೆ ಅಹುದಲ್ಲೊ ?

**ಅಪ್ಪಾಜಿ:—** (ಗಂಭೀರವಾಗಿ) ಇಷ್ಟೇ ಅಲ್ಲ, ನಾನು ಹೆಣ್ಣುಮಗಳ ತಂದೆ ಇರುವೆ; ಇಷ್ಟೇ ಅಲ್ಲ, ನನ್ನ ಮಗಳ ಮದಿವೆ ಆಗಿಲ್ಲ; ಇಷ್ಟೇ ಅಲ್ಲ, ನನ್ನ ಮಗಳ ಮದಿವೆ ಆಗಲೇಬೇಕು; ಇಷ್ಟೇ ಅಲ್ಲ, ಅದಕ್ಕಾಗಿ ಅಳಿಯನನ್ನು ಶೋಧಿಸುತ್ತಿರುವೆ; ದೇಶ – ದೇಶಾಂತರ ಪ್ರವಾಸ ಮಾಡಿರುವೆ.

ಇಷ್ಟೇ ಅಲ್ಲ, ಈ ಸಂಸಾರ ಚಕ್ರದಲ್ಲಿ ತಿರುತಿರುಗಿ ಮತ್ತೆ ನನ್ನ ದೇಶಕ್ಕೆಯೆ ಬಂದಿರುವೆ.

**ತಿಮ್ಮಾಜಿ:—** (ಬೇಜಾರವಾಗಿ) ಇಷ್ಟೆಲ್ಲ ಸ್ವಲ್ಪದರಲ್ಲಿ ಹೇಳಬಾರದಾಗಿತ್ತೆ ಮಹಾರಾಯಾ ?

**ಅಪ್ಪಾಜಿ:—** (ದೈನ್ಯದಿಂದ) ಸ್ವಲ್ಪದರಲ್ಲಿ ಹೇಗೆ ಹೇಳಲಿ ? ಹೆಣ್ಣು ಹುಟ್ಟಿದ್ದು ಸ್ವಲ್ಪವೆ? ಮದಿವೆ ಮಾಡುವದು ಸ್ವಲ್ಪವೆ ?

**ತಿಮ್ಮಾಜಿ:—** (ತಿರಸ್ಕಾರದಿಂದ) ಸ್ವಲ್ಪದರಲ್ಲಿ ಅಂದರೆ ಸರಳ ಮಾತಿನಲ್ಲಿ.

**ಅಪ್ಪಾಜಿ:—** ( ಆಶ್ಚರ್ಯದ ಸೋಗಿನಿಂದಲೂ ತಿರಸ್ಕಾರದ ನಗೆಯಿಂದಲೂ ) ಸರಳ ಮಾತಿನಲ್ಲಿ ! ರಾಯರೆ, ನಿಮ್ಮ ಮಾತು ಸರಳವೊ ಹೇಗೆ ವಿಚಾರ ಮಾಡಿನೋಡಿರಿ. ಹೆಣ್ಣು ಹುಡುಗೆಯ ತಂದೆಯು ಸರಳ-ಮಾತನಾಡಬೇಕೆ ? ಹೆಣ್ಣು ಹುಟ್ಟಿ ಹದಿನಾಲ್ಕು ವರುಷ, ಹುಟ್ಟಿದ್ದು ಹೆಣ್ಣು ಅಲ್ಲವೆಂದು ಸಮಾಧಾನ ಹಚ್ಚಿಕೊಳ್ಳುವದು ಸರಳ ವಿಚಾರದಿಂದ ಶಕ್ಯವಿದೆಯೆ ? ನೋಡಿರಿ; ಮುಂದೆ ಬೆಳೆಯುವ ಹುಡುಗೆಯನ್ನು ಮುಚ್ಚಬೇಕು, ಇಲ್ಲವಾದರೆ ಹುಡುಗೆಯ ಬೆಳವಣಿಗೆಯನ್ನು ಮುಚ್ಚಬೇಕು. ಸರಳ ಬುದ್ಧಿಯಿಂದ ಇದು ಶಕ್ಯವಿದೆಯೆ? ಇದಲ್ಲದೆ, ಮೆಚ್ಚುವಂತಹ ಹುಡುಗನನ್ನು ಹುಡುಕಬೇಕು, ಅವನ ಕುಂದುಗಳನ್ನು ಕಾಣಬೇಕು, ಕೊರತೆಗಳನ್ನು ಕೆಣಕಬೇಕು, ಕುಟಿಲತನವನ್ನು ಕೆದರಬೇಕು. ಇಷ್ಟೊಂದು ಸಾಹಸದಲ್ಲಿ ಕಬ್ಬಿಣ ಕೂಡ ಕಾದು ಮಣಿದು ಡೊಂಕಾಗಬಹುದು, ಸ್ವಾಮೀ, ಮನುಷ್ಯನ ಪಾಡೇನು ?

**ತಿಮ್ಮಾಜಿ:—** ಸ್ವಾಮೀ, ಇದನ್ನು ಕೇಳುವವನ ಪಾಡೇನು? ಬ್ರಹ್ಮನ ಮಗಳು ಸರಸ್ವತಿಯೆಂದು ಕೇಳಿದ್ದೆ ಇದುವರೆಗೆ; ಆದರೆ

ಸರಸ್ವತಿಯು ಅಪ್ಪ ಬ್ರಹ್ಮನೆಂಬ ಕಲ್ಪನೆ ಕೂಡ ಹೊಳೆದಿದ್ದಿಲ್ಲ ನನಗೆ.

ಅಪ್ಪಾಜಿ:— (ಸಂಶಯದಿಂದ) ಸರಳ ಮಾತಿನಲ್ಲಿ ಇದರ ಅರ್ಥವೇನು ?

ತಿಮ್ಮಾಜಿ.— ನೀವು ಮಾತಿನಲ್ಲಿ ಸರಳರಲ್ಲೆಂದು. ಹೆಣ್ಣುಮಗಳಂತೆ! ಅವಳ ತಂದೆಯಂತೆ ! ಎಷ್ಟು ಜನರಿಲ್ಲವೋ ಅಂತಹರು ?

ಅಪ್ಪಾಜಿ:— (ಸಮಾಧಾನದಿಂದ) ತಮಗೆ ಹೆಣ್ಣು ಮಗಳು—

ತಿಮ್ಮಾಜಿ:— (ಅವಸರದಿಂದ ಕಳೆ ಅಲ್ಲಾಡಿಸಿ) ಅಂತಹದೇನೂ ಇಲ್ಲ.

ಅಪ್ಪಾಜಿ:— (ಉದಾಸೀನನಾಗಿ) ಅಂದರೆ ನಿಮಗೇನು ತಿಳಿಯುವದು ನಮ್ಮಂತಹ ಹೆಣ್ಣುಮಕ್ಕಳ ತಂದೆಯ ಸ್ಥಿತಿ ?

ತಿಮ್ಮಾಜಿ:— (ಹೆಮ್ಮೆಯಿಂದ) ತಿಳಿಯದೆ ಏನು ? ಹೆಣ್ಣುಮಕ್ಕಳ ತಂದೆಯ ಕೂಡ ಎಷ್ಟೋ ಸಂಬಂಧವಿದೆ ನನ್ನದು. ಅದೇಕೆ? ನನ್ನ ಹೆಂಡತಿಯ ತಂದೆ, ಅವನೂ ಹೆಣ್ಣುಮಗಳ ತಂದೆಯೆ ಅಲ್ಲವೆ ? ನನಗೆ ಗೊತ್ತಿದೆ. ಅವನಿಗೂ ಗೋಳು. ಅದನ್ನ ಮುಂದೆ ನನ್ನ ಕೊರಳಿನಲ್ಲಿ ಕಟ್ಟಿದ.

ಅಪ್ಪಾಜಿ:— ( ಉಸುರ್ಗರೆದು ) ಆದರೆ ನನ್ನ ಸ್ಥಿತಿ ಬೇರೆ. ನಾನು ಬಡವ. ಎರಡುಸಾವಿರಕ್ಕಿಂತ ಒಂದು ಕಾಸು ಹೆಚ್ಚು ವರದಕ್ಷಿಣೆ ನನ್ನಿಂದ ನೀಗುವಂತಿಲ್ಲ. ಕೇಳಿದಲ್ಲೆಲ್ಲಾ ಐದುಸಾವಿರ. ಅದಕ್ಕಾಗಿ ದೇಶವನ್ನೆಲ್ಲ ತಿರುಗಾಡಿದೆ. ಆದರೇನು ? ಎಲ್ಲಿ ಹೋದರೂ ಹಣವು ಒಂದೇ, ಅದರ ಬೆಲೆಯೂ ಒಂದೇಅಲ್ಲವೆ ? ನಾನು ಮಾತ್ರ ಸ್ವತಃ ಬೆಲೆ ಬಾಳದೆ ಸೋತು ಹೆಣವಾಗಿ ಬಂದಿರುವೆ.ಖೊಟ್ಟಿ ನಾಣ್ಯದಂತೆ ಸಾವಿರಾರು ಜನರಿಂದ ಬಿಸಾಡಿಸಿಕೊಂಡು ಬಂದಿರುವೆ. ( ಸಿಟ್ಟಿನಿಂದ ) ಇನ್ನಾದರೂ ನಮ್ಮ ಜನರಿಗೆ ತಮ್ಮತನದ ಅಭಿಮಾನ ಬರಬಾರದೆ? ಸ್ವಾಮೀ, ನೀವೇ ಹೇಳಿರಿ.

**ತಿಮ್ಮಾಜಿ:**— ಹುಡುಗೆಯನ್ನು ನೋಡದೆ ನಾನು ಏನೂ ಹೇಳುವಂತಿಲ್ಲ.

**ಅಪ್ಪಾಜಿ:**— ( ಆನಂದಾತಿರೇಕದಿಂದ ) ಏನು-ನೀವು-ನನ್ನ- ಹುಡುಗೆ—

**ತಿಮ್ಮಾಜಿ:**— ( ಗಂಭೀರವಾಗಿ ) ಹಾ, ಇಷ್ಟೊಂದು ಅವಸರ ಬೇಡ. ಇನ್ನೂ ನಾನು ನಾನೇ, ನಿಮ್ಮ ಹುಡುಗೆಯು ನಿಮ್ಮವಳೇ. ನಾನು ಮೊದಲು ನೋಡುವವನು. ನಮ್ಮ ಹುಡುಗನ ಮನಸ್ಸಿಗೆ—

**ಅಪ್ಪಾಜಿ:**— ( ನಿರಾಶೆಯಿಂದ ) ನಿಮ್ಮ ಹುಡುಗನ ಸಲುವಾಗಿ ನೋಡುವವರೆ!

**ತಿಮ್ಮಾಜಿ:**— ( ಸಿಟ್ಟಿನಿಂದ ) ಅಂದರೆ? ನನ್ನ ಸಲುವಾಗಿ ನಾನು ನೋಡುವೆನೆಂದು ತಿಳಿದಿರುವಿರೇನು? ನಾನೇನು ಇನ್ನೂ ಮದಿವೆ ಮಾಡಿಕೊಳ್ಳಬೇಕೆಂಬ ಉತ್ಸಾಹದ ಹುಚ್ಚು-ಹುಡುಗ ವಯಸ್ಸಿನವನಲ್ಲ. ಕಾಣುವದಿಲ್ಲವೆ?

**ಅಪ್ಪಾಜಿ:**— ( ದೀನವಾಣಿಯಿಂದ ) ನನಗೇನು ಕಾಣುವದಯ್ಯಾ? ಹುಡುಗೆಯ ಸಲುವಾಗಿ ನೋಡಿ ನೋಡಿ ನನ್ನ ದೃಷ್ಟಿಯು ಹುಡುಗೆಯ ದೃಷ್ಟಿಯಂತೆ ಆಗಿದೆ.

**ತಿಮ್ಮಾಜಿ:**— ( ಸಂಶಯದಿಂದ ) ಅಂದರೆ? ಹುಡುಗೆಯ ದೃಷ್ಟಿಯಿಂದ ನಾನು ಬೇರೆಯಾಗಿ ಕಾಣುವೆನೇನು?

**ಅಪ್ಪಾಜಿ:**— ( ನಕ್ಕು ) "ಸಂದೇಹವೇನಿದರೊಳಿಂದಿರೆಯ ರಮಣಾ." ನನ್ನ ಹುಡುಗಿ ಬೆಳೆದವಳು. ಬೆಳೆದ ಹುಡುಗೆಯ ದೃಷ್ಟಿಯೆಂದರೆ- ಸಂಜೀವನೀ ಔಷಧ, ಸಂಜೀವನೀ. ಮುದುಕರು ತರುಣರಾಗುವರು, ಹತಾಶರಿಗೆ ಉತ್ಸಾಹ ತುಂಬುವದು, ಕುರೂಪಿಗಳಿಗೆ ಕಳೆಯೇರುವದು. ನಿಮ್ಮಂತಹ-

**ತಿಮ್ಮಾಜಿ:**— ( ಸಿಟ್ಟಿನಿಂದ ) ಸಾಕು. ನೀವು ಮಾಡುವ ನನ್ನ ವರ್ಣನೆ

ಯನ್ನು ಕೇಳಿದರೆ ಇದ್ದ ಹೆಂಡತಿ ಓಡಿ ಹೋಗಬಹು ದಾಗಿದೆ. ನಿಮ್ಮ ದೃಷ್ಟಿ ಬೇಡ. ನಿಮ್ಮ ಕೂಡ ಮಾತು ಬೆಳೆಸಿದರೆ—

ಅಪ್ಪಾಜಿ:— ( ವಿನಯದಿಂದ ) ಹೆಣ್ಣು ಬೆಳೆಸಿದ ಮಾತಿಗೆ—

ತಿಮ್ಮಾಜಿ:— ( ಗದ್ದರಿಸುತ್ತ ) ಮಾತು ಬೆಳೆಸುವ ಹೆಣ್ಣಿನಂತೆ ಹರಟೆ ಕೊಚ್ಚುವಿರಲ್ಲ.

ಅಪ್ಪಾಜಿ: — (ಕೈ ಮುಗಿದು) ಕೊಚ್ಚಿದ ಹರಟೆ ಕಚ್ಚುವದಿಲ್ಲ. ಕ್ಷಮಿಸಿರಿ ನನ್ನನ್ನು. ವರನನ್ನು ಶೋಧಿಸುವ ಮಾತನಾಡಿಯಾ ಬ್ಯಾಡಿ ಶೋಧಿಸಿದ ವರನ ಮಾತನಾಡುವ ರೂಢಿಯೆ ಇಲ್ಲ ದಂತಾಗಿದೆ. ಒಪ್ಪಿಗೆ. ನೀವು ಹೇಳಿದಂತೆ ಮಾಡುವೆ. ಆದರೆ ನನ್ನ ಹುಡುಗೆಯು ಸಲುವಾಗಿ ಇನ್ನಿಷ್ಟು ಹೇಳುವದಿದೆ.

ತಿಮ್ಮಾಜಿ:— ( ಕೈ ಮುಗಿದು ) ನೀವು ಇದುವರೆಗೆ ಹೇಳಿದ್ದನ್ನು ಕೇಳಿ ಕಾದು ಕೆಂಡದಂತೆ ಹೆಚ್ಚೆಚ್ಚು ಸುಡಹತ್ತಿರುವ ಸೂರ್ಯ. ನಡೆಯಿರಿ. ( ಹೋಗುತ್ತಲೆ ) ವರದಕ್ಷಿಣೆ ಹತ್ತುಸಾವಿರ ಅಂದಿರಲ್ಲವೆ ?

ಅಪ್ಪಾಜಿ:— ( ಅವನ ಹಿಂದಿನಿಂದ ನಡೆಯುತ್ತ ) ನಿಜವಾಗಿಯೆ ಸೂರ್ಯನು ಸುಡಹತ್ತಿರುವ ನೋಡಿರಿ. ( ಒಮ್ಮೆಲೆ ಸ್ಮರಣೆಗೆ ಬಂದಂತೆ ) ಓಹೊ, ವರದಕ್ಷಿಣೆಯೆ ! ಎರಡುಸಾವಿರ ಎಂದೆ.

ತಿಮ್ಮಾಜಿ:— ( ತಿರುಗಿ ನೋಡುತ್ತ ) ಹೀಗೊ ? ನಾನು ಹತ್ತುಸಾವಿರ ಎಂದು ಮಾಡಿದೆ. ( ನಗೆಯಿಂದ ) ನನಗೆ ಮರೆಯುವ ದೊಂದು ಕೆಟ್ಟ ಚಟವಿದೆ, ನೋಡಿರಿ.

ಅಪ್ಪಾಜಿ:— ( ತಲೆದೂಗಿ ) ಹೀಗೊ ? ಅದನ್ನು ಎಂದಿಗೂ ಮರೆಯುವ ದಿಲ್ಲ. ನಡೆಯಿರಿ.

( ಇಬ್ಬರೂ ಹೋಗುವರು ).

## ಪ್ರವೇಶ ೨

( ಎರಡನೆಯ ಅಂಕಿನ ಮೂರನೆಯ ಪ್ರವೇಶದಲ್ಲಿ ತೋರಿಸಿದ ಕೋಣೆ. ಮಧ್ಯಾಹ್ನದ ೪-೪|| ಗಂಟೆಯಾದುದರಿಂದ ಸಣ್ಣ ಮೇಜಿನ ಮೇಲಿನ ದೀಪವು ಮಾತ್ರ ಈಗ ಕಂಡುಬರುವದಿಲ್ಲ. ಮಿಕ್ಕದ್ದೆಲ್ಲ ಮೊದಲು ವರ್ಣಿಸಿದಂತೆಯೆ. ಮಂಚಾಸನದಲ್ಲಿ ಕುಳಿತ ಮನೋರಮೆಯ ಪರಿಚಯು ಕೂಡ ಹತ್ತುವಂತಿಲ್ಲ. ಸಂತಾಪದಿಂದ ಬಳಲಿ, ಬಾಡಿದ ಬಳ್ಳಿಯಂತೆ ಕಳೆಗುಂದಿರುವಳು. ಮಾತನಾಡಬೇಕೆಂದು ಎರಡು-ಮೂರು ಸಲ ಮೇಜಿನ ಮೇಲೆ ಎರಡೂ ಕೈಗಳನ್ನೂರಿ ಎದುರಾಗಿ ಕುಳಿತ ವಿದ್ಯಾಧರನಕಡೆಗೆ ನೋಡುವಳು. ನೋಡಿದ ಸಲ ಒಮ್ಮೆ ವಿದ್ಯಾಧರನು ಮುಗುಳುನಗೆ ಮಿಂಚಿಸುವನು. ಆ ಮಿಂಚಿನಲ್ಲಿ ಬಾಡಿದ ಬಳ್ಳಿಯು ಮತ್ತಿಷ್ಟು ಬಾಡಿದಂತೆ ಕಾಣುವದು. ಕಡೆಗೆ ಇವನ್ನೆಲ್ಲ ತಡೆಯದೆ ವಿದ್ಯಾಧರನೇ ಮಾತನಾಡುವನು ).

ವಿದ್ಯಾಧರ:— ಎಷ್ಟೊಂದು ವಿಚಾರ ನಡೆಸಿರುವಿ, ಯಾವ ವಿಚಾರ ನಡೆಸಿರುವಿ, ನನಗಂತೂ ಆಶ್ಚರ್ಯವೆನಿಸಿಹೋಗಿದೆ.

ಮನೋರಮೆ:—( ಅವನ ಕಡೆಗೆ ನೋಡದೆ ) ನನಗೂ ಆಶ್ಚರ್ಯವೆನಿಸಿದೆ. ( ಉಸುರುಗರೆಯುವಳು. ಕೆಲ ಹೊತ್ತಿನ ಮೇಲೆ) ವಿದ್ಯಾಧರಾ, ನಿನ್ನ ಮಾತನ್ನು ಕೇಳಿ ಯಾರಿಗೆ ಆಶ್ಚರ್ಯವಾಗಲಿಕ್ಕಿಲ್ಲ?

ವಿದ್ಯಾಧರ:— ಅಂತಹದೇನಿದೆ ನನ್ನ ಮಾತಿನಲ್ಲಿ? ಮನದ ಇಚ್ಛೆಯನ್ನು ಮನಬಿಚ್ಚಿ ಹೇಳಿದೆ; ಇದರಲ್ಲಿ ಆಶ್ಚರ್ಯವೇನು ?

ಮನೋರಮೆ:—ನಿನಗೆ ಮನಸ್ಸಾದರೂ ಇದೆಯೊ ಇಲ್ಲವೊ ಇದೇ ನನ್ನ ಆಶ್ಚರ್ಯ.

ವಿದ್ಯಾಧರ:— ನನಗೆ ಮನಸ್ಸು ಇದೆಯೊ ಇಲ್ಲವೊ? ( ಮುಂದೆ ಬಂದು ) ಮನೋರಮಾ, ಇದರಲ್ಲಿ ನಿನಗೆ ಆಶ್ಚರ್ಯವಾಗಬೇಕೆ ? ನನಗೆ - ನನಗೆ ಮನಸ್ಸು ಇಲ್ಲವೇ ಇಲ್ಲ.

ಮನೋರಮೆ:—( ಸಂತಾಪದಿಂದ ) ಮನಸ್ಸು ಇಲ್ಲವೆಂದೇ ಹೀಗೆ ಕಟುಕ ನಾಗಿರುವಿ, ಹೀಗೆ ಅವಿಚಾರಿಯಾಗಿರುವಿ.

ವಿದ್ಯಾಧರ:— ಮನೋರಮಾ, ಮನಸ್ಸು ಇಲ್ಲವೆಂದು ನಾನೇ ಹೇಳಲಿಲ್ಲವೆ? ಆದರೆ ಮನಸ್ಸಿಲ್ಲವೆಂದು ನನಗೆ ಕಟುಕನೆನ್ನಬೇಡ, ಮನಸ್ಸಿಲ್ಲವೆಂದು ನನಗೆ ಅವಿಚಾರಿಯೆನ್ನಬೇಡ. ಇದ್ದ ಮನಸ್ಸನ್ನು ಕಳೆದುಕೊಂಡದ್ದಕ್ಕಾಗಿ ಒಂದು ವೇಳೆ ನಾನು ಅವಿಚಾರಿಯೆನ್ನಬಹುದು. ಆದರೆ, ಮನೋರಮಾ, ನನಗೆ ಕಟುಕನೆನ್ನಬೇಡ. ಕೇವಲ ಮನಸ್ಸು ಇಲ್ಲದ್ದಕ್ಕಾಗಿ ನಾನು ಕಟುಕನಾದರೆ ನನ್ನ ಮನಸ್ಸನ್ನು ಒಯ್ದ ನೀನು (ಮನೋರಮೆಯು ಕುಳಿತಲ್ಲಿಯೆ ಕಾಲು ನೆಲದ ಮೇಲೆ, ಕೈ ತೊಡೆಯ ಮೇಲೆ, ಅಪ್ಪಳಿಸಿ ಮುಖ ತಿರುಗಿಸುವಳು. ವಿದ್ಯಾಧರನು ಮಂಚಾಸನದ ಬದಿಯ ಮೇಲೆ ಕುಳಿತುಕೊಂಡು) ಮನೋರಮಾ, ಕೋಪಿಸಬೇಡ. ಮನಸ್ಸನ್ನು ಒಯ್ಯುವಿ, ಕಟುಕಳಂತೆ ಕೊಯ್ಯುವಿ, ಮೇಲೆ ಅವಿಚಾರಿಯೆಂದು ಕೋಪಿಸುವೆಯಾ?

ಮನೋರಮೆ:—(ಎದ್ದು ತಿರುಗಿ ನಿಂತು ಸಿಟ್ಟಿನಿಂದ) ಕೋಪಿಸುವೆ, ಕೋಪಿಸುವೆ. ನೀನು ಸಾವಿರ ಹೇಳಿದರೂ ಕೋಪಿಸುವೆ, ನೀನು ಸಾವು ಹೊಡೆದರೂ ಕೋಪಿಸುವೆ. (ಮತ್ತೆ ಕುಳಿತು) ಇವನದೇನು ಹಂಗು ನನಗೆ?

ವಿದ್ಯಾಧರ:— (ಸುಳ್ಳು ನಗೆಯಿಂದ) ಹಂಗಿನ ಅರಮನೆಗಿಂತ—

ಮನೋರಮೆ:—(ಸಿಟ್ಟಿನಿಂದ) ಕಂಗಾಲಗೆ ಸೆರೆಮನೆಯೇ ಲೇಸು—ನಿನ್ನಂತಹಾ ಕಂಗಾಲಗೆ.

ವಿದ್ಯಾಧರ:— ಸಾಕು ನಿನ್ನ ಹಂಗಿನ ಮಾತು. ಮನೆಯೊಳಗೆ ಸೆರೆಸಿಕ್ಕು ಹೊರಗಿನ ಸೆರೆಮನೆ ಮಾಡುವುದೇನು ನಿನಗೆ? (ತಿರಸ್ಕಾರದಿಂದ) ತಡೆಯುವೆನೆಂದು ತಡೆಯಿಲ್ಲದೆ ಕೇಳುವೆಯಲ್ಲವೆ? ನಿನ್ನದೇನು ಮಾಡಿರುವೆ ಅಂತಹ ಪಾಪ?

ರೋಗದಿಂದ ಬಳಲುವ ಗಂಡ ಕೆಂಡದಂತೆ ಎಂದು ಹೇಳಿದ್ದು ಅಪರಾಧವಲ್ಲವೆ? ಮುಳುಗುವವನ ತೆಕ್ಕೆ ಬಿದ್ದು ಮುಳುಗಬೇಡೆಂದು ಹೇಳಿದ್ದು ತಪ್ಪಾಯಿತಲ್ಲವೆ? ಮನೋರಮಾ—

ಮನೋರಮೆ:—( ಮೊದಲಿನಂತೆ ) ನನ್ನ ಹೆಸರು ಬೇಡ ನಿನ್ನ ಬಾಯಿಯೊಳಗೆ.

ವಿದ್ಯಾಧರ:— ( ಹಟದಿಂದ ) ಮನೋರಮಾ—ನಿನ್ನ ಹೆಸರು ಮನೋರಮಾ—ನೀನು ಮನೋರಮಾ; ನೀನು ಮನೋರಮಾ ಎಂದೇ ನಿನಗೆ ಹೇಳುವೆ, ನೀನು ನನ್ನ ಮನೋರಮಾ ಎಂದೇ ಹೇಳುವೆ. ನೀನು ಕಿವಿ ಮುಚ್ಚು, ತಲೆ ಅಲ್ಲಾಡಿಸು, ಕಾಲು ಅಪ್ಪಳಿಸು; ನನಗೆ ಅದರ ಪರಿವೆಯೆ ಇಲ್ಲ. ನಿನ್ನ ಶರೀರದ ಯಾವ ಹಾವಭಾವಗಳಿಂದಲೂ ನನಗೆ ಅಸಂತೋಷವಿಲ್ಲ. ಶರೀರದಿಂದ ನೀನು ಎರಡನೆಯವರ ಮನೋರಮಾ; ಮನೋರಮೆಯ ಶರೀರ ಎರಡನೆಯವರದೆ. ಮನಸ್ಸಿನಿಂದ ನೀನು ನನ್ನ ಮನೋರಮಾ, ಮನೋರಮೆಯ ಮನಸ್ಸು ನನ್ನದೇ.

ಮನೋರಮೆ:—( ದ್ವೇಷದಿಂದ ) ಏನು ಸುಖ ಕಾಣುವನೆ ಮನೋರಮೆಯ ಮನಸ್ಸನ್ನು ಕಟ್ಟಿಕೊಂಡು? ದ್ವೇಷದಿಂದ ಸೂಸುವ ಈ ಮನೋರಮೆಯ ಮನಸ್ಸು ವಿಷಮಜ್ವರದಂತೆ ಹಿಡಿಯುವದು ನಿನ್ನನ್ನು. ಕೋಪದಿಂದ ಕುದಿಯುವ ಈ ಮನೋರಮೆಯ ಮನಸ್ಸು—

ವಿದ್ಯಾಧರ:— ಕುದಿಯುವ ಆ ಮನಸ್ಸಿನಲ್ಲಿ ನನ್ನ ಇಚ್ಛೆಗಳ ಪಕ್ವಾನ್ನ ಮಾಡುವೆ. ( ಮುಂದೆ ಬಂದು ಕಳಕಳಿಯಿಂದ ) ಮನೋರಮಾ, ನಿನಗೆ ಆಣೆ ಮಾಡಿ ಹೇಳುವೆ, ಮನೋರಮೆಯ

ಶರೀರ ನನ್ನದಲ್ಲ, ಎಂದಿಗೂ ಅದು ನನಗೆ ಬೇಡವೆಂದು. ನಿನಗೆ ಎದೆ ಮುಟ್ಟಿ ಹೇಳುವೆ—

ಮನೋರಮೆ:—( ವಿಕಾರವಾಗಿ ನಕ್ಕು ಅಣಕಿಸಿಂದ ) ಕೈ ಸುಟ್ಟೀತು ಎಚ್ಚರ, ಬೊಟ್ಟುಗಳ ಪಕ್ವಾನ್ನವಾದೀತು ಎಚ್ಚರ!

ವಿದ್ಯಾಧರ:— ( ಸಿಟ್ಟಿನಿಂದ ) ಎಚ್ಚರ? ಎಚ್ಚರ ಎಂದಿಯಲ್ಲವೆ? ( ತಿರಸ್ಕಾರದಿಂದ ನಕ್ಕು ) ಆಶ್ಚರ್ಯ. ಎಚ್ಚರ ತಪ್ಪಿ, ತಪ್ಪಿದವರಿಗೆ ಎಚ್ಚರ ಕೊಡುವೆಯಲ್ಲವೆ? (ಬೇಜಾರ ತೋರಿಸಿ) ನನಗೇನು ಮಾಡುವದಿದೆ ಈ ಕುರುಡು ಎಚ್ಚರದಿಂದ, ಇಲ್ಲವೆ ಈ ಕಿವುಡ ಹರಟೆಯಿಂದ? ( ಗಂಭೀರವಾಗಿ ) ಎಚ್ಚರ ತಪ್ಪುವದರೊಳಗಾಗಿ ಹೇಳಿಡುವೆ. ನಾನು ಒಂದದ್ದು ನಿನ್ನ ಸಲುವಾಗಿ ಅಲ್ಲ. ನಿನ್ನನ್ನು ಸಂಕಟದಲ್ಲಿ ತಂದದ್ದು ನಿನ್ನ ಸಲುವಾಗಿ ಅಲ್ಲ. ಹೇಡಿ ಹೆಂಗಸರನ್ನು ಹೆದರಿಸಿ ಹುಲಿ ತೊಗಲಿನ ಅಂತಃಪಟ ಹಿಡಿದು ಬಲಾತ್ಕಾರದಿಂದ ವಶ ಮಾಡಿಕೊಳ್ಳುವದು ನಾಟಕದ ಪಾತ್ರಕ್ಕೆ ಶಕ್ಯವಿರಬಹುದು, ಇಲ್ಲವೆ ಹರಿಹರರಾಯನಂತಹಗೆ ಒಪ್ಪಬಹುದು. ಆದರೆ—

ಮನೋರಮೆ:—( ತಿರಸ್ಕಾರದಿಂದ ) ಆದರೆ ಮಲಗಿದವರ ಮೋರೆಗೆ ಕಪ್ಪು ಹಚ್ಚುವ ನಿನ್ನಂತಹಾ ವೀರನಿಗೆ ಒಪ್ಪುವದಿಲ್ಲ!

ವಿದ್ಯಾಧರ:— ( ಆಶ್ಚರ್ಯ ತೋರಿಸುತ್ತ ) ಓಹೊ, ಇಷ್ಟೊಂದು ತಿಳಿಯಿತಲ್ಲವೆ ನಿನಗೆ? ನಾನು ಕಪ್ಪು ಹಚ್ಚಿದೆನಲ್ಲವೆ? ಹುಚ್ಚೀ, ನೀನು, ನಿನ್ನ ಕೂಡ ನಾನು ಈ ಮನೆಯೊಳಗೆ ಕಾಲಿಡುವದಕ್ಕಿಂತ ಮುಂಚಿತವಾಗಿಯೆ ಕಪ್ಪು ಹತ್ತಿದೆ. ಹುಚ್ಚಿಯಂತೆ ನೀನು ಕಣ್ಣು ಮುಚ್ಚಿದೆ; ನೀನು ಹುಚ್ಚಿಯೆಂದು ನಾನು ಕಣ್ಣು ತೆರೆದೆ. ನಾನೇ ಕಪ್ಪು ಹಚ್ಚಿದೆನಲ್ಲವೆ?

ಮನೋರಮೆ:—(ದ್ವೇಷದಿಂದ) ಹತ್ತಿರದ ಕಪ್ಪನ್ನು ಸಾರಿಸಬೇಕೆನ್ನುವದಿಲ್ಲವೆ ನೀನು ಊರ ತುಂಬ ? (ಕಳಕಳಿಯಿಂದ) ವಿದ್ಯಾಧರಾ, ವಿದ್ಯಾಧರಾ, ಇನ್ನಾದರೂ ವಿಚಾರ ಮಾಡು. ಇದ್ದ ಮನೆ ಇಲ್ಲದಂತೆ ಮಾಡಿದಿ; ಇಲ್ಲದ ಸುಖವನ್ನು ಇರದಂತೆ ಮಾಡಿದಿ. ಇನ್ನೂ ಸಮಾಧಾನವಿಲ್ಲವೆ ನಿನಗೆ? ಮನೋರಮೆಯ ಮನೆ ಮುರಿದಿ; ಮನೋರಮೆಯ ಮನಸ್ಸನ್ನು ಮುರಿದಿ. ಬಿಟ್ಟು ಹೋಗಬಾರದೆ ಆ ಬಿದ್ದ ಚೂರುಗಳನ್ನು ? ನದಿಯಲ್ಲಿ ಹರಿಬಿಟ್ಟು ಯಾಕೆ ನದಿಗುಂಟ ಡಂಗುರ ಹೊಡೆಯುವಿ ? (ಕಣ್ಣೀರು ತಂದು) ವಿದ್ಯಾಧರಾ, ಅವರ ಕಡೆಗೆ ನೋಡಿಯಾದರೂ ಬಿಡಬಾರದೆ ನಿನ್ನ ಹಟವನ್ನು ? ನಿನ್ನನ್ನು ಉಳಿಸಿದವರು, ನಿನ್ನನ್ನು ಬೆಳೆಸಿದವರು, ನಿನ್ನಂತೆ ಉಳಿದವರಿಗಾದರೂ ನೆರಳು ಕೊಡುವ ಆಲದ ಮರ; ಅದನ್ನು ಕಡಿದು ಯಾಕೆ ನಮ್ಮೆಲ್ಲರ ಗುಡಿಸಲವನ್ನು ಕಟ್ಟುವಿ? (ಮುಂದೆ ಬಂದು ಕೈನೀಡಿ) ಹೇಳು, ಹೇಳು. ಅವರ ಸಲುವಾಗಿ ಬೇಕಾದ್ದನ್ನು ಮಾಡುವೆ. ಕೋಟೆಯ ಕಲ್ಲಿಗಾಗಿ ಅರಮನೆಯನ್ನು ಸಹ ಕೆಡಹಿಸುವೆ.

ವಿದ್ಯಾಧರ:— (ನಕ್ಕು) ನನಗೆ ಕೋಟೆ ಬೇಡ, ಅರಮನೆ ಬೇಡ; ಕೋಟಿ-ಕೋಟಿ ಅರಮನೆ ಕಟ್ಟಿಸುವ ಶಕ್ತಿಯುಳ್ಳ ಸಂಪತ್ತು ಬೇಕು ನನಗೆ.

ಮನೋರಮೆ:— (ಏನೂ ತಿಳಿಯದೆ ಅವನನ್ನು ದಿಟ್ಟಿಸಿ ಕೆಲಹೊತ್ತಿನ ಮೇಲೆ) ಸಂಪತ್ತು ! ಅಂತಹ ಸಂಪತ್ತು ! ನಿನಗೆ ಬೇಕಾದದ್ದು ಸಂಪತ್ತು !

ವಿದ್ಯಾಧರ:— ಬೇಕಾದ ಸಂಪತ್ತು ಅಲ್ಲ ನನಗೆ ಬೇಕಾದದ್ದು; ಬೇಡಾದ

ಹರಿಹರರಾಯನ ಸಂಪತ್ತು. (ಸಿಟ್ಟಿನಿಂದ) ಯಾ
ಸಂಪತ್ತಿನ ಸೊಕ್ಕಿನಿಂದ ನನ್ನ ಮೋಹದ ಮನೋರಮೆ
ಯನ್ನು ಬಲುಮೆಯಿಂದ ಬಲಿಯೆಂದು ಸ್ವೀಕರಿಸಿದನೋ
ಆ ಹರಿಹರರಾಯನ ಸಂಪತ್ತು. ಯಾವನು—

ಮನೋರಮೆ:—(ಸಿಟ್ಟಿನಿಂದ) ಸಾಕು, ಹೆಚ್ಚಿಗೆ ಮಾತನಾಡಬೇಡ. (ತಿ
ಸ್ಕಾರದಿಂದ) ಸಂಪತ್ತು ಬೇಕೆ ನಿನಗೆ! ಬಲುಮೆಯಿಂದ
ಪ್ರೇಮದ ಗಂಟನ್ನು ಕದ್ದರೆಂದು, ಬಲುಮೆಯಿಂದ
ಗಂಟಿನ ಪ್ರೇಮ ಹೂಡಿದೆಯಲ್ಲವೆ? ಸಂಪತ್ತು! ನೀಚನ
ಸಂಪತ್ತು! ಕುನಸಿನ ಸಂಪತ್ತು! ವಿದ್ಯಾಧರಾ, ಇಂತಹ
ನಿನ್ನ ಮನಸ್ಸಿನಲ್ಲಿ ಪ್ರೇಮದ ಸಂಪತ್ತು ಇದ್ದಿರಬಹು
ದೆಂಬ ಕಲ್ಪನೆ ಕೂಡ ಬರುವದೆ? ವಿದ್ಯಾಧರಾ—

ವಿದ್ಯಾಧರ:— (ತಿರಸ್ಕಾರದಿಂದ) ಇನ್ನು ಸಾಕು ಮಾಡು ನಿನ್ನ ಪುಣ್ಯಕಥೆ
(ಕೈಗಡಿಯಾರವನ್ನು ನೋಡಿಕೊಂಡು) ನಿನ್ನ ಪ್ರೇಮದ ಗಂಟು
ತಿರುಗಿ ಬರುವ ಹೊತ್ತಾಯಿತು; ಅದಕ್ಕೆ ಪ್ರೇಮದಿಂದ
ಗಂಟು ಬಿಗಿಯುವ ಮುಂಚಿತವಾಗಿ—

ಮನೋರಮೆ:—(ಗಂಭೀರವಾಗಿ) ನಿನ್ನ ಗಂಟು ಕಟ್ಟಿಕೊಂಡು ಹೊ
ಬೀಳು.

ವಿದ್ಯಾಧರ:— ಹೊರಬೀಳಲು ಒಂದು ಕಾಲಿನ ಮೇಲೆ ಸಿದ್ಧನಿರುವೆ
ಹಾಗೆ ಹೊರಬಿದ್ದರೆ ನಿಮಗೆ ಮಾತ್ರ ಎಂತಹ ಕಾ
ಒದಗುವದೆಂದು ಲಕ್ಷ್ಯದಲ್ಲಿಡು. ಆಮೇಲೆ—

ಮನೋರಮೆ:—(ಸಂಶಯದಿಂದ) ಆಮೇಲೆ? ನಾನೇನು ಮಾಡುವದು

ವಿದ್ಯಾಧರ:— ನನಗೆ ಬೇಕಾದಂತೆ, ನಿಮ್ಮ ಸಂಪತ್ತನ್ನೆಲ್ಲಾ ಒಪ್ಪಿಸು
ವದು.

ಮನೋರಮೆ:—ಅದರ ಒಡೆಯರು ಬಂದರೆ—

ವಿದ್ಯಾಧರ:— ಆ ಒಡೆಯರ ಒಡತಿ ನೀನಿರುವೆಯೆಂದು ನಿನ್ನ ಕಡೆಗೆ ಬಂದಿರುವೆ.

ಮನೋರಮೆ:—(ಸುಳ್ಳು ನಗೆಯಿಂದ) ಆ ಸಂಪತ್ತಿಗೆ ನಿನ್ನಕಿಂತ ಹೆಚ್ಚು ಬುದ್ಧಿಯಿದೆ. ನೀನು ಬಂದಂತೆ ಅದು ನನ್ನ ಕಡೆಗೆ ಎಂದಿಗೂ ಬರುವದಿಲ್ಲ.

ವಿದ್ಯಾಧರ:— (ಸಂಶಯದಿಂದ) ಅಂದರೆ ?

ಮನೋರಮೆ:—ಮೋಹಿನಿಯ ಮದಿವೆಯಾಗುವವನ ಕಡೆಗೆ ಹೋಗುವದು.

ವಿದ್ಯಾಧರ:— ನಿನಗೆ ಯಾರು ಹೇಳಿದರು ?

ಮನೋರಮೆ:—ಅವರೇ ಬರೆದಿಟ್ಟಿದ್ದಾರೆ ತಮ್ಮ—ತಮ್ಮ—

ವಿದ್ಯಾಧರ:— ಮೃತ್ಯುಪತ್ರದಲ್ಲಿ ? ( ಮನೋರಮೆಯು ತಲೆದೂಗುವಳು). ಹಾಗಾದರೆ ಮೋಹಿನಿಯು ಕೂಡ ನನ್ನ ಮದಿವೆ ಮಾಡು.

ಮನೋರಮೆ:—(ಆಶ್ಚರ್ಯದಿಂದ) ವಿದ್ಯಾಧರಾ—

ವಿದ್ಯಾಧರ:— —ಇಲ್ಲವಾದರೆ ನನಗೆ ಆ ಮೃತ್ಯುಪತ್ರವನ್ನು ಒಪ್ಪಿಸು.

ಮನೋರಮೆ:—( ತಿರಸ್ಕಾರದಿಂದ ಅವನನ್ನು ಕೆಲಹೊತ್ತು ಕೆಕ್ಕರಿಸಿ ) ಮೋಹಿನಿಯು ಕೂಡ ಇವನ ಮದಿವೆ ! —ಮನೋರಮೆಯ ಮಗಳಾದ ಮೋಹಿನಿಯು ಕೂಡ ಇವನ ಮದಿವೆ ! ಮನಸ್ಸಿನಿಂದ ತನ್ನವಳೆಂದು ತಿಳಿದುಕೊಂಡ ಮನೋರಮೆಯ ಮಗಳು ! (ಸಿಟ್ಟಿನಿಂದ) ಕರ್ಕಶಾ, ನೀಚಾ, ಹೇಸೀ, ಮೋಹಿನಿಯು ಮನಸ್ಸಿನಿಂದ ನಿನಗೆ ಮಗಳಲ್ಲವೆ ?

ವಿದ್ಯಾಧರ:— (ನಕ್ಕು) ಆದರೆ ನನಗೆ ಮನಸ್ಸೇ ಇಲ್ಲವಲ್ಲ ! ಆಶ್ಚರ್ಯವಲ್ಲವೆ ? ( ಒಳಗೆ ಸಪ್ಪಳವಾದುದನ್ನು ಕೇಳಿ ಲಗಬಗೆಯಿಂದ ) ಅಗೊ, ನಿನ್ನ ಮನಸ್ಸು ಬಂದಿತು ತಿರುಗಿ. ನನ್ನ ಮನ

ಸ್ಸಿನ ಸಲುವಾಗಿ ಬಹಳ ವಿಚಾರ ಮಾಡಬೇಡ. **ಮೋಹಿನಿಯ ಮದಿವೆ, ಇಲ್ಲವೆ ಮೃತ್ಯುಪತ್ರ.** ಮಾತನಾಡಬೇಡ, ಕೇಳಿಕೊ; ಮುಂದೆ ನನಗೆ ವೇಳೆಯಿಲ್ಲ. ಈ ದಿನ ರಾತ್ರಿ ಬರುವೆ. ಮದಿವೆಯ ಉತ್ಸಾಹದ ದೀಪಗಳು ಬೆಳಗಲಿ, ಇಲ್ಲವೆ ಮೃತ್ಯುಪತ್ರದ ಮೃತ್ಯುವಿನ ಕತ್ತಲೆ ಕವಿಯಲಿ. ಕಾಲನಂತೆ ಬರುವೆ, ಮರೆಯಬೇಡ, ಕಾಲ ಕಳೆಯಬೇಡ. (ಎಡಬದಿಯ ಬಾಗಿಲಿನಿಂದ ಹೋಗುವನು).

(ಮನೋರಮೆಯು ದಂಗು ಬಡೆದವಳಂತೆ ನಿಂತುಕೊಂಡು “ ಕಾಲನಂತೆ ಬರುವೆ ” ಎಂಬ ಶಬ್ದಗಳನ್ನು ಹೆದರಿಕೆಯಿಂದ ಉಚ್ಚರಿಸಿ “ ಬಂದಂತಹ ಕಾಲ ಬರಲಿ ” ಎಂದು ಉಸುರ್ಗರೆದು, ಮಂಚಾಸನದ ಮೇಲೆ ಬಂದು ಕುಳಿತುಕೊಳ್ಳುವಳು. ಹರಿಹರರಾಯನು [ರಂಗಭೂಮಿಯ ಎದುರು – ನಡುವಿನ-ಬಾಗಿಲಿನಿಂದ] ಬರುವನು. ಕಚೇರಿಯಿಂದ ಬಂದಿರುವನೆಂಬುದು ವೇಷದಕಿಂತ, ಅವನ ಬಾಡಿದ ಮುಖದಿಂದ ಹೆಚ್ಚಾಗಿ ಕಂಡು ಬರುವದು. ಮೇಜಿನ ಹತ್ತಿರ ನಿಂತುಕೊಂಡು, ಉಸುರ್ಗರೆದು, ಮನೋರಮೆಯನ್ನು ನೋಡಿ, ಮುಗುಳು ನಗೆಯಿಂದ)

ಹರಿಹರ:— ಇದೇನು ! ನನಗೆ ಬರಲಿಕ್ಕೆ ತಡವಾಯಿತೆ ? (ಕೈಗಡಿಯಾರವನ್ನು ನೋಡಿಕೊಂಡು) ಇಲ್ಲ, ಸರಿಯಾದ ವೇಳೆಗೆ ಬಂದಿರುವೆ. ಕೋಪವಿಲ್ಲವಷ್ಟೆ ?

ಮನೋರಮಾ:—(ಆನಂದವನ್ನು ತೋರಿಸುವ ಹಟದಿಂದ) ಕೋಪವೆ ? ನೋಡೆ ಕಚೇರಿಯ ನ್ಯಾಯ !

ಹರಿಹರ:— (ಆಕಳಿಸುತ್ತ) ನಿಜ. ಕಚೇರಿಯ ನ್ಯಾಯಕ್ಕೆ ನನಗೂ ಬೇಜಾರಾಗಿ ಹೋಗಿದೆ. ಹಾಳು ಜನರ ಕೂಡ ವ್ಯವಹಾರ. ಇವರ ಜೀವ ಉಳಿಸುವದಕ್ಕೆ ನಮ್ಮ ಜೀವ ಹೋಗುವವರೆಗೆ ಎದೆ–ಗಂಟಲು ಕೀಸರು ಇಡುವದು ! ಮುಂದೇನಿದೆ ? ನಾವೇ ಅಪರಾಧಿಗಳೊ ಎನೋ ಎನ್ನು

ವಂತೆ ಕಣ್ಣೆತ್ತಿ ನನ್ನನ್ನು ನೋಡುವದಿಲ್ಲ ಕೂಡ! (ತಿಮ್ಮಾಜಿಯು ಅದೇ ಬಾಗಿಲಿನಿಂದ ಬರುವನು. ತಿಮ್ಮಾಜಿಗೆ) ಯಾಕೆ, ಹಣ ಕೊಟ್ಟನೇನು?

ತಿಮ್ಮಾಜಿ:— ಹಣ ಕೇಳಿದರೆ ಹೆಣದಂತೆ ನಿಲ್ಲುವ. (ಸಿಟ್ಟಿನ ನೋಟದಿಂದ) ನಾನೇನೊ ಸಣ್ಣ ಹುಡುಗನೆಂದು ತಿಳಿದಿರುವ. ನಮಗಾ ಥಾಸ ಕೊಡಲು ಬರುವ. (ನಗೆಯಿಂದ) ನಾನೂ ಅಂತ-ಇಂತಹನಲ್ಲ. ಕಡೆಗೆ ಏನಿಲ್ಲೆಂದರೂ ಈ ಹೊತ್ತಿನ ನಾಟಕಕ್ಕೆ ಮುಂದಿನ ಸಾಲಿನಲ್ಲಿ ಮೂರು ಜಾಗಗಳನ್ನು ಗೊತ್ತು ಮಾಡಿಸಿದೆ ಅವನ ಕಡೆಯಿಂದ. (ಮನೋರಮೆಗೆ) ಮನೋರಮಾ, ನೋಡಿದೆಯಾ ಈ ಯಾಳು ಹಳ್ಳಿಯ ಸಕ್ಕಗಾರರನ್ನು? (ಆನಂದದಿಂದ ರಾಯರಿಗೆ) ಈ ಹೊತ್ತು ಎಲ್ಲರೂ ತಲೆದೂಗಿದರು.

ಮನೋರಮೆ —(ಸಂಶಯದಿಂದ) ಯಾಕೆ? ಏನಾಯ್ತು ಈ ಹೊತ್ತು?

ತಿಮ್ಮಾಜಿ (ಆಶ್ಚರ್ಯ ತೋರಿಸುತ್ತ) ಏನಾಯ್ತು! ಅಮ್ಮಾ, ಈ ಹೊತ್ತು ಬರಬೇಕಾಗಿತ್ತು ಕಚೇರಿಗೆ. (ಅಭಿಮಾನದಿಂದ) ರಾಯರು ಮಾತನಾಡಹತ್ತಿದರೆ— ಓಹೊ ಏನು ಶಬ್ದ! ಏನು ಶೈಲಿ! ನಾವು ಆರೋಪಿಯ ಕಡೆಯವರು. ಕೊಲೆಯ ಆರೋಪಣೆ. ಆದರೇನು? ರಾಯರ ವಾಕ್ಪ್ರವಾಹದಲ್ಲಿ ತೊಳೆತೊತ್ತೊಳೆದು ಹೋಯಿತು ಆ ಕೊಲೆಯ ಪಾಪ ಎಲ್ಲಾ. ಕುಳಿತವರಿಗೆಲ್ಲಾ ಕಣ್ಣೀರು. ನನಗೂ ಕೂಡ—ಇಷ್ಟು ಅನುಭವ ಇದ್ದವನಿಗೆ—ಕಣ್ಣೀರು ತಡೆಯದಂತಾಯ್ತು. (ಆದರದಿಂದ) ಅದೇಕೆ, ನ್ಯಾಯಾಧೀಶರೂ ಕೂಡ ಒಮ್ಮೆ ಕಣ್ಣು ಒರೆಸಿಕೊಂಡರೆಂದು ನನ್ನ ಸಂಪೂರ್ಣ ಭರವಸೆ.

ಮನೋರಮೆ:—(ಆನಂದದಿಂದ) ಇಷ್ಟಾದ ಮೇಲೆ ಬಿಟ್ಟಿರಲಿಕ್ಕಿಲ್ಲವೆ ಆರೋಪಿಯನ್ನು ?

ತಿಮ್ಮಾಜಿ: (ರಾಯರು ಅಸಮಾಧಾನದಿಂದ ಒಂದು ಕುರ್ಚಿಯಲ್ಲಿ ಕುಳಿತುಕೊಳ್ಳುವದನ್ನು ನೋಡಿ) ಬಿಡಲಿ, ಬಿಡದಿರಲಿ; ಅದರದೇನು ಮಹತ್ವ ಇಲ್ಲ. ಆದರೆ ನಮ್ಮ ರಾಯರ ವಾತನಾಡುವ ಧೋರಣೆ ಎಂತಹದು ! ನಮ್ಮ ಯುಕ್ತಿ ಎಂತಹವು ! ನಮ್ಮ ಸೂಚನೆ ಎಂತಹವು ! ಇದೇ ಕಚೇರಿಯೇ ಆರೋಪಿಯ ಯಮಲೋಕ ಎಂದು ಎಲ್ಲರೂ ನಿಸ್ಸಂಶಯವಾಗಿ ನಂಬಿದ್ದರು. ಆದರೆ ಇವರ ಮಾತನ್ನು ಕೇಳಿದ ಮೇಲೆ ವಿಚಾರಣೆಯು ಮೇಲಿನ ಕಚೇರಿಗೆ ಹೋಗೇ ಹೋಗುವದು, ಹೋಗಲೇಬೇಕು ಎಂದು ಎಲ್ಲರಿಗೂ ತಟ್ಟನೆ ಹೊಳೆಯಿತು.

ಹರಿಹರ:— (ಸರಿಬರಲಿಲ್ಲವೆಂದು ತೋರಿಸುತ್ತ) ಇರಲಿ ಬಿಡು, ತಿಮ್ಮಾಜಿ. ನಮ್ಮ ನಮ್ಮ ಕೆಲಸ ನಾವು ಸರಿಯಾಗಿ ಮಾಡಿದರೆ ಅದರಲ್ಲಿ ಹೇಳಿಕೊಳ್ಳುವಂತಹದೇನು ?

ಮನೋರಮೆ:—(ಸಂಶಯದಿಂದ) ಆದರೆ ಆರೋಪಿಯನ್ನು ನಿರ್ದೋಷಿಯೆಂದು ಬಿಡಲಿಲ್ಲವೆಂದು ತಿಮ್ಮಾಜಿ ಹೇಳುವನಲ್ಲ !

ತಿಮ್ಮಾಜಿ:— (ಸಿಟ್ಟಿನ ನೋಟದಿಂದಲೂ ತಿರಸ್ಕಾರದಿಂದಲೂ) ನಿರ್ದೋಷಿ ! ನೀಚನಿರುವ ಅವ. ಅವನನ್ನು ಬಿಡಿಸುವೆವೆಂದು ನಾವೇನು ವಚನ ಕೊಟ್ಟಿದ್ದಿಲ್ಲ. ಆದರೆ ಕೊಟ್ಟ ವಚನಕ್ಕೆ ತಪ್ಪಿದ ಆ ನೀಚನನ್ನು ನಿರ್ದೋಷಿಯೆಂದು ಬಿಟ್ಟರೂ ನನಗೆ ಸಮಾಧಾನವಿಲ್ಲ. ಮೂರುಸಾವಿರ ರೂಪಾಯಿಗಳನ್ನು ಕೊಡುವೆನೆಂದು ನಾಟಕದ ಮೂರು ಜಾಗೆ ಕೊಟ್ಟಿರುವ ! (ನಗೆಯಿಂದ) ಇವನ ವಿಷಯವಾ

ಗಿಯೆ ನಾಟಕ ಬರೆಯುವಂತಿದೆ. (ಹರಿಹರರಾಯನಿಗೆ) ಏನೇ ಇರಲಿ, ನಿಮಗಾದರೂ ಈ ಹೊತ್ತಿನ ದಿವಸ ಬಹಳ ಶ್ರಮವಾಗಿದೆ. ನಾಟಕ ನೋಡಹೋದರೆ ವಿಶ್ರಾಂತಿ ಯಾಗಬಹುದು.

ಹರಿಹರ:— (ಮನೋರಮೆಗೆ) ಬರುವೆಯೇನು ನಾಟಕಕ್ಕೆ ?

ಮನೋರಮೆ:—(ಆಶ್ಚರ್ಯದಿಂದ) ನಾ-ನು........

ತಿಮ್ಮಾಜಿ:— ಹೋಗಿ ಬನ್ನಿ ನೀನೂ. ಬರೆದವನಾದರೂ ಒಳ್ಳೇ ನೋಗ ಸಗಾರನಂತೆ. ಉದಾತ್ತವಾದ ವಿಚಾರ. ಮಾರ್ಮಿಕ ಹಾಸ್ಯ. ತಿಳಿದುಕೊಂಡರೆ ಅಲ್ಲಲ್ಲಿ ಹೊಳೆಯುವಂತಹಾ ಮಾತು. ಸ್ವತಃ ಆವನಿಗೆ ನಾಟ್ಯಕಲೆ ಬರುವದಂತೆ !

ಹರಿಹರ:— (ಎಷ್ಟು ಉತ್ಸಾಹದಿಂದ ಮನೋರಮೆಗೆ) ಹಾಗಾದರೆ ನಡೆ ಹೋಗುವಾ. ಕನ್ನಡ ಜನರು ಕನ್ನಡದೊಳಗೆ ಮೊದಲು ನಾಟಕ ಬರೆಯುವದೇ ಹೆಚ್ಚಿನದು. ಬರೆದರೆ ಕಲಿ ಗೊತ್ತಿಲ್ಲದವರ ಕಿಲಬಿಲದಾಟ. ನಡೆ. ಇದೇನೊ ಹೊಸ ಮಾದರಿಯ ನಾಟಕ ಬರೆದಿರಬೇಕು.

ತಿಮ್ಮಾಜಿ — (ನಗುತ್ತ) ಬರೆದವನೇ ಹೊಸ ಮಾದರಿಯ ಹುದ್ದರಿ. ನಾ—ನಾ ಎಂದು ಬಲ್ಲವರೊಳಗೆ ಇವ ಅಸ್ಪಾದವಿಯ ವನಂತೆ ! ಹೋಗಬಾರದೆ ಮನೋರಮಾ ?

ಮನೋರಮೆ —(ವಿಷಾದದಿಂದ) ಬೇಕಾದಷ್ಟು ಉತ್ಸಾಹವಿದೆ ನನಗೆ. ಆದರೆ ಶೋಡಿ, ಮಾಡುವದೇನು ? ನಿದ್ದೆ ತಡೆಯೋದೇ ನನಗೆ ಸರಿ ಹೋಗೋದಿಲ್ಲ. (ಸಿಟ್ಟಿನ ನೋಗಿನಿಂದ) ಆದರೊಳಗೆ ಎಲ್ಲಿಂದ ಪ್ರೇಮ ಬಂದಿತೊ ಇವರಿಗೆ ಹೆಂಡತಿಯ ಮೇಲೆ. ಆ ವಿದ್ಯಾಧರನಿಗೆ ಹೇಳಿದರು ನನಗೆ ಏನೊ ಆಗಿದೆ ಅಂತೆ. ಅವನಿಗಂತೂ ತನ್ನ ವಿದ್ಯೆಯ ಹುಚ್ಚು.

ಡಾಕ್ಟರನೆಂದ ಮೇಲೆ ಬೇನೆ ಇದೆ ಎಂದೇ ಹೇಳಬೇಕ ಲ್ಲವೆ ? (ತಿರಸ್ಕಾರದಿಂದ) ನನಗೇನೊ ಹೊತ್ತು ತಪ್ಪಿಸಿ ಕೆಲಸ ಮಾಡೋದೂ, ನಿದ್ದೆ ತಡೆಯೋದೂ ಹಿತಕರ ಅಲ್ಲ ಅಂತೆ. (ನಿರಾಶೆಯಿಂದ) ಬೇಡಿಯೆ ಒಂದಿಲ್ಲ—

ಹರಿಹರ:— (ಖೇದದಿಂದ) ನನಗೇನು ಗೊತ್ತು ಇದೆಲ್ಲ ? ತಿಮ್ಮಾಜಿ, ನಾನೂ ಹೋಗುವದಿಲ್ಲ.

ಮನೋರಮೆ:—ನೋಡಿದಿರಾ ! ಡಾಕ್ಟರ ಹೇಳಿದಂತೆ ಕೂಡ ಮಾಡುವ ಸ್ವಾತಂತ್ರ್ಯ ಇಲ್ಲ. ಅವನು ಹೋಗಬೇಡೆಂದು ಹೇಳಿದ್ದು ನನಗೆ. ಮುಂಜಾನಿನಿಂದ ದುಡಿದು ದುಡಿದು—

ತಿಮ್ಮಾಜಿ:— (ತಲೆದೂಗಿ) ಅಹುದು, ರಾಯರೆ. ನನಗೆ ಕೇಳಿದರೆ ನೀವು ಹೋಗಬೇಕೆಂದೇ ನನ್ನ ಅಭಿಪ್ರಾಯ. ಮೋಹಿನಿಯನ್ನು ಕರೆದುಕೊಂಡು ಹೋದರಾಯಿತು.

ಮನೋರಮೆ:—(ಬೇಜಾರವಾಗಿ) ಮೋಹಿನಿಯನ್ನು ಕಟ್ಟಿಕೊಂಡು ಹೋಗು ವದು ಯಾಕೆ ಮತ್ತೆ ? ನಣ್ಣಾಕೆ, ನಿದ್ದೆ ಬರಲಿ, ಬೇಜಾರ ಬರಲಿ; ಮತ್ತೆ ಒಂದು ತೊಡಕು. ನೀವು ನೀವು ಹೋದರೆ ಅದೊಂದು ತಮಾಷೆ. (ನಾಚಿಕೆಯ ಬಿರಿಮುಗುಳ ನಲ್ಲಿ ) ನಾಟಕ ಮುಗಿದ ಕೂಡಲೆ ಮನೆಗೆಯೆ ಮಾತ್ರ ತಿರುಗಿ ಬರಬೇಕು. (ತಿಮ್ಮಾಜಿಯು ಹೊಟ್ಟೆತುಂಬ ನಗುವನು).

ಹರಿಹರ:— (ತ್ರಾಸಿನಿಂದ) ಆಗಲಿ. ಈ ಹೊತ್ತು ನಮ್ಮ ಮೇಲೆ ಯಾರ ವಿಶ್ವಾಸವೂ ಇಲ್ಲ. ( ಹೊರಡುವನು ).

ಮನೋರಮೆ:— ವಿಶ್ವಾಸವೇ ಇಲ್ಲವೆಂದ ಮೇಲೆ ಹೆದರಿಕೆ ಯಾಕೆ ? ಹೋಗುವಾಗ್ಗೆ ನಿಮ್ಮ ಪೆಟ್ಟಿಗೆಯ ಬೀಗ ಕೊಟ್ಟು ಹೋಗಿರಿ.

ಹರಿಹರ:— (ತಿರುಗಿ ನಿಂತು) ವಿಶ್ವಾಸದ ಮುಡುಪು ಎಂದು ಕೊಡಲೇ ಬೇಕು. ಉಪಾಯವಿಲ್ಲ. (ಎಡಬದಿಯ ಬಾಗಿಲಿನಿಂದ ಹೋಗುವನು).

ಶಿವ್ರಾಜ:— (ನಗುತ್ತ) ಇದೇನು, ಮನೋರಮಾ, ಒಳ್ಳೇ ಹೌಸಿನಲ್ಲಿರುವಿ ಈ ಹೊತ್ತು ? ( ತಲೆದೂಗಿಸುತ್ತ ) ಛೆ, ಛೆ, ಇಂತಹ ನಿನ್ನ ತಮಾಷೆಯನ್ನು ಎಂದಿಗೂ ನೋಡಿಲ್ಲ. ( ನಡುವಿನ ಬಾಗಿಲಿನಿಂದ ಹೋಗುವನು).

ಮನೋರಮೆ:—(ಆಶ್ಚರ್ಯದಿಂದ) ನಾನು ಹೌಸಿನಲ್ಲಿರುವೆನೆ ? ನನ್ನ ತಮಾಷೆಯೆ ? (ಒಮ್ಮೆಲೆ ಗಾಬರಿಯಿಂದ) ಹುಚ್ಚಿ, ನಾನು ನಾಟಕಕ್ಕೆ ಯಾಕೆ ಹೋಗಲಿಲ್ಲ ? ಹುಚ್ಚೀ, ನಿನ್ನ ನಾಟಕ ನೋಡುವ ಹೌಸಿನಲ್ಲಿರುವೆಯಾ ? (ಎಂದು ಮುಖ ಮುಚ್ಚಿಕೊಂಡು ಕೂಡುವಳು. ಕೆಲಹೊತ್ತಿನ ಮೇಲೆ ಮೆಲ್ಲಗೆ ಕಣ್ಣು ತೆರೆಯುತ್ತ ಒಮ್ಮೆಲೆ ಗಾಬರಿಯಿಂದ ಚೀರಿದಂತೆ ಮಾಡಿ) ಬೇಡ, ಬೇಡ, ನಾನೂ ಬರುವೆ. (ಎಂದು ಏಳಲು ಪ್ರಯತ್ನ ಮಾಡಿ ಸಾಮರ್ಥ್ಯ ಸಾಲದೆ ದೊಪ್ಪೆಂದು ಮಂಚದ ಮೇಲೆ ಬಿದ್ದುಕೊಳ್ಳುವಳು. ಆ ಮೇಲೆ ಹೆದರಿದವರ ಹೃತ್ಪಟಲದಂತೆ ಹರಿದುಬೀಳುವ–)

(ತೆರೆ)



## ಪ್ರವೇಶ ೩

(ಅದೇ ದಿವಸ ಹೊತ್ತು ಮುಳುಗುವ ಸಮಯ. ಎರಡನೆಯ ಅಂಕಿನ ಎರಡನೆಯ ಪ್ರವೇಶದಲ್ಲಿ ಕಾಣಿಸಿದ ಬಯಲು. ಕಾಮಿಯೂ ಅವನ ಹಿಂದೆ ಅವನ ೧ನೆಯ ಮತ್ತು ೨ನೆಯ ಗೆಳೆಯರು ಬರುವರು. ಕಾಮಿಯು ವಿಚಾರಭರದಿಂದ ಇತ್ತಿಂದತ್ತ ಹೆಜ್ಜೆ ಇಡುತ್ತಿರುವನು. ಆದುದರಿಂದ ಅವನ ಗೆಳೆಯರು ವಿಚಾರಶೂನ್ಯರಂತೆ ಅವನ ಹಿಂದಿನಿಂದಲೆ ಹೆಜ್ಜೆ ಇಡುತ್ತಿರುವರು. ಕೆಲ ಹೊತ್ತಿನ ಮೇಲೆ ಇಬ್ಬರೂ ಗೆಳೆಯರು ದಣಿದು ಉಸ್ಸೆಂದು ನಿಂತು ಬಿಡುವರು).

೧ನೆ:— (ಬೆವರು ಒರೆಸಿಕೊಳ್ಳುತ್ತ ೨ನೆ. ನಿಗೆ) ಈ ಕಾಮಿಯ ವಿಚಾರವು ಎಂದಿಗಾದರೂ ಹೀಗೆಯೆ; ದೇಶವಿಲ್ಲ, ಕಾಲವಿಲ್ಲ, ತಿರುಗೇ ತಿರುಗುವದು. ನನಗಂತೂ ಅದರ ಬೆನ್ನುಹತ್ತಿ ಕಾಲು ಸೋತವು

ಕಾಮಿ:— (ಒಮ್ಮೆಲೆ ನಿಂತು, ಗಂಭೀರವಾಗಿ) ಗೆಳೆಯರೆ, ಎಂದಾದರೂ ನೀವು ವಿಚಾರ ಮಾಡಿರುವಿರೊ ?

೧ನೆ:— (ಬೇಜಾರದಿಂದ) ನನಗೇನು ಅಂತಹ ಪ್ರಸಂಗ ಬಂದಿಲ್ಲ ! ವಿಚಾರ ಮಾಡುವದರೊಳಗಾಗಿ ಮನೆ ಮಾಡಿಬಿಟ್ಟೆ. ವಿಚಾರಕ್ಕೆ ಜಾಗೆಯೆ ಇರಲಿಲ್ಲ.

೨ನೆ:— (ನಗೆಯಿಂದ) ನನಗಂತೂ ವಿಚಾರ ಮಾಡುವದಕ್ಕಿಂತ ಮಾಡುವದರ ವಿಚಾರವೆ—

ಕಾಮಿ:— (ಕನಿಕರದಿಂದ) ಅಯ್ಯೋ ದುರ್ದೈವಿಗಳೆ ! ಎಂತಹ ವಿಚಾರದ ವೇಳೆಯಲ್ಲಿ ಎಂತಹ ವೇಳೆಯೆಂದು ವಿಚಾರ ಮಾಡುವಿರಲ್ಲವೆ ?

೨ ನೆ:— (ಸಂಶಯದಿಂದ) ಎಂತಹ ವೇಳೆ ?

ಕಾಮಿ:— ( ಮಹತ್ವಸೂಚಕ ಮೆಲುದನಿಯಲ್ಲಿ ) ಹುಚ್ಚಿನಂತಹ ವೇಳೆ;

ಅರಳಿದ ಹುವ್ವಿನಂತಹ ವೇಳೆ. ಹುವ್ವು ಅರಳಿದಾಗ್ಗೆ ನೋಡುತ್ತಲೆ ನಿಲ್ಲುವೆಯಾ? ವೇಳೆ ಒದಗಿದಾಗ್ಗೆ ನೋಡುತ್ತಲೆ ನಿಲ್ಲುವೆಯಾ? ನೋಡಿದ ಹೂವು ಬಾಡುವದು; ಕಳೆದ ವೇಳೆ ಕೊಳೆಯುವದು. ಇಲ್ಲವೆ ಸಹೃದಯರಾದ(ಕಳಕಳಿಯಿಂದ) ನನ್ನ ಸಹೃದಯರಾದ, ತರುಣ, ರಸಿಕ ಗೆಳೆಯರೆ, ಅಂತಹ ವೇಳೆಯನ್ನು ಹುವ್ವಿನಂತೆ—ಅರಳಿದ ಹುವ್ವಿನಂತೆ—ಕೋಮಲ ಬಳ್ಳಿಯಿಂದ ಕಡಿದು ಜಾಗ್ರತೆಯಾಗಿಯೂ ಜಾಗರೂಕರಾಗಿಯೂ ನಿಮ್ಮ ಕರಕಮಲಗಳೆಂಬ ಬೊಗಸೆಗಳ ಬುಟ್ಟಿಯಲ್ಲಿ ಬೆಳೆಯಗೊಡುವಿರೊ? ಇಂತಹ ವೇಳೆಯನ್ನು—

೧ನೆ:— (ಕೊಂಚ ಅಸಮಾಧಾನದಿಂದ, ಕೊಂಚ ಆವೇಶದಿಂದ) ಎಂತಹ ವೇಳೆಯೆಂದು ಹೇಳಬಾರದೆ? ಅದನ್ನು ಕಡಿದು ಹಿಡಿಯುವೆ, ಹಿಡಿದ ಕಯ್ಯಿಂದ ಹಿಚುಕುವೆ.

೨ನೆ:— (ತಿರಸ್ಕಾರದಿಂದ) ಹೇಳಲಿಲ್ಲವೇನೊ ಹುವ್ವಿನಂತಹ ವೇಳೆಯೆಂದು? ಹಿಚುಕುವಿಯೇನು—ನಿನ್ನ ತಲೆ?

೧ನೆ:— (ಪೂರ್ಣ ಅಸಮಾಧಾನದಿಂದ) ತಿಳಿಯುವಂತೆ ಹೇಳಿದ್ದರೆ ತಿಳಿದು ಮಾತನಾಡುತ್ತಿದ್ದೆ. ಇಲ್ಲದೆ—

ಕಾಮಿ:— ( ನೊಂದುಕೊಂಡುದನ್ನು ತೋರಿಸಬಾರದಂತೆ ) ಗೆಳೆಯರಿರಾ, ಇನ್ನೇನು ತಿಳಿಯುವದಿದೆ? ಹುವ್ವು ಮನೆಯಲ್ಲಿ ಬಿದ್ದಿದೆ, ವೇಳೆ ಕಯ್ಯಲ್ಲಿ ಸಿಕ್ಕಿದೆ.

೨ನೆ:— ( ಸಂಶಯದಿಂದ ) ಆದರೆ ತೋಟದವನು?

ಕಾಮಿ:— (ಆನಂದದಿಂದ ಚಪ್ಪಳಿಕ್ಕಿ) ಅಹಾ! ಅದನ್ನು ಹೇಳಬೇಕೆ! ಕಮಲದಂತೆ ಸೂಕ್ಷ್ಮವಾದ ಈ ಪ್ರಶ್ನದ ಎಸಳನ್ನೆ

ಹಿಡಿದಿರುವಿ ನೋಡು. (ಆನಂದ ಪರವಶನಾಗಿ) ತೋಟದ ವನು ಅಡವಿಗೆ ಹೋಗಿರುವ ಹಹಹಾ. ( ನಗುವನು ).

ಗನೆ:- (ತಿನೆ. ನಿಗೆ ಮೆಲ್ಲಗೆ) ಎಂತಹ ದುಷ್ಟನಿರುವಿಯೊ ? ಅವನು ಹೇಳಿದ್ದನ್ನೆಲ್ಲ ತಿಳಿದುಕೊಂಡಿರುವಿ. ನನಗೂ ತಿಳಿಸಬಾರ ದಾಗಿತ್ತೆ ?

ತಿನೆ:— ( ನಕ್ಕು, ಅವನಂತೆಯೆ ) ನನಗೆಲ್ಲಿ ತಿಳಿದಿತ್ತು ? ಏನೊ ಹೂವು ಎಂದ, ನಾನು ತೋಟ ಎಂದೆ !

ಕಾಮಿ:— ( ಆನಂದದ ಆ ವೇಗವನ್ನು ತಡೆದು ) ಸಾಕು. ಇನ್ನೇಕೆ ವಿಚಾರ ? ರಾತ್ರಿಯಲ್ಲಿ ಹೋಗುವೆ, ಹುವ್ವು ಕಡಿದು ಕೊಂಡು ಬರುವೆ.

ಗನೆ:— (ಹೆದರಿದಂತೆ ) ರಾತ್ರಿಯಲ್ಲಿ ಹೋಗುವದೆ ?

ಕಾಮಿ:— (ತಲೆದೂಗಿ) ರಾತ್ರಿಯಲ್ಲಿ. ( ಹತ್ತಿರ ಬಂದು ಮೆಲ್ಲಗೆ ) ರಾತ್ರಿ ಯಲ್ಲಿ ಹೋಗುವೆ. ಹರಿಹರರಾಯನು ನಾಟಕಕ್ಕೆ ಹೋಗುವ; ಮನೋರಮಾ ನಾಟಕಕ್ಕೆ ಹೋಗುವಳು. ಮೋಹಿನಿಯೊಬ್ಬಳೇ ಮನೆಯಲ್ಲಿ ! ( ಎದೆಗೆ ಕೈಹಚ್ಚಿ ) ಆಹಾ ! (ಎಂದು ಹಲ್ಲು ಕಚ್ಚಿ ಆವೇಶದ ಮುಖಮುದ್ರೆಯನ್ನು ತಾಳಿ ನಿಲ್ಲುವನು ).

ಗನೆ:— ( ಬೆದರಿ ) ಏನು ? ಮೋಹಿನಿಗೆ....

ಕಾಮಿ:— ( ಹೆಮ್ಮೆಯಿಂದ ) ಮೋಹಿನಿಗೆ ಮೋಹನಾಸ್ತ್ರ. ಇದಕ್ಕೆ ಹೆದರುವೆ ಯಾಕೆ ? ದುಷ್ಯಂತನು ಶಕುಂತಲೆಯನ್ನು ವರಿಸಿದ್ದು ಅವಳ ತಂದೆ ಇಲ್ಲದಾಗ್ಗೆಯೆ ಅಲ್ಲವೆ ? ಅರ್ಜು ನನು ಸುಭದ್ರೆಯನ್ನು ಅಪಹರಿಸಿದ್ದು—

ತಿನೆ:— ( ಸಮಾಧಾನದಿಂದ ) ಓಹೊ, ನನಗೆಲ್ಲ ಗೊತ್ತಿದೆ. ದೊಡ್ಡ

ವರ ಮದಿಸೆ ಧರ್ಮದ ಪ್ರಕಾರ ಎಂದಿಗೂ ಎಲ್ಲಿಯೂ ಆಗಿಲ್ಲ. (ಮೆಲ್ಲಗೆ) ಆದರೆ—

ಕಾಮಿ:— (ತಿರಸ್ಕಾರದಿಂದ) ಆದರೆ ಏನು ? ನಾನೂ ದೊಡ್ಡವನಾಗಿರುವೆ. ನಾನೂ ಪ್ರೇಮಪರವಶನಾಗಿರುವೆ.

೨ನೆ:— ( ಮೊದಲಿನಂತೆ ) ಆದರೂ ಮೊದಲು ಮೋಹಿನಿಯ ತಂದೆ-ತಾಯಿಗಳನ್ನು ಕೇಳಿದರೆ ?

ಕಾಮಿ:— ( ತಿರಸ್ಕಾರದಿಂದ ) ಅವರನ್ನು ಕೇಳುವದೆ? ಅವರು ಯಾರು ? ನನ್ನ ಮದಿವೆಯಲ್ಲಿ ಅವರದೇನು ಸಂಬಂಧ? ಹಿರಿಯರನ್ನು ಕೇಳಿದರೆ ಅದೇನು ಪ್ರೇಮವಿವಾಹವೆ? ( ಗಂಭೀರವಾಗಿ ) ಕೇಳಿದರೆ ಒಪ್ಪಿಗೆಯನ್ನು ಕೊಡುವರೆಂಬ ಆಶ್ವಾಸನೆ? ಆಶ್ವಾಸನೆಯೆಲ್ಲಿ? ನನ್ನ ಗೆಳೆಯರಿರಾ, ಪ್ರೇಮವಿದ್ದಲ್ಲಿ ವಿಶ್ವಾಸವಿಲ್ಲ, ವಿಶ್ವಾಸವಿದ್ದಲ್ಲಿ ಪ್ರೇಮವಿಲ್ಲ, ಸಾಕು. ಮೋಹಿನಿಯು ಮಲಗುವ ಕೋಣೆ ನನಗೆ ಗೊತ್ತಿದೆ. ಮನೆಯ ಹಿಂದಿನ ತೋಟದಿಂದ ಆ ಮೇಲುಪ್ಪರಿಗೆಗೆ ದಾರಿಯಿದೆ.

೧ನೆ:— ( ಸಂಶಯದಿಂದ ) ಆದರೆ ಪಾವಟಿಗೆ ಇಲ್ಲವಲ್ಲ!

ಕಾಮಿ:— ( ತಿರಸ್ಕಾರದಿಂದ ) ಪಾವಟಿಗೆ! ಪ್ರೇಮಕ್ಕೆ ಪಾವಟಿಗೆ ಬೇಕೆ? ಪಾವಟಿಗೆಗಳಿಂದ ಹೆಜ್ಜೆ ಎಣಿಸುತ್ತ ಹೋಗುವವರು ನಿಷ್ಪ್ರೇಮಿಗಳು, ಕಟುಕರು, ಕಳ್ಳರು; ( ಕೈ ಜಾಡಿಸಿ ) ನನಗೆ ಬೇಡ. ( ಆವೇಶದಿಂದ )—

ಹಕ್ಕಿಯಂತೆ ಹಾರುವೆ ನಾನು.
ಪ್ರೇಮದ ಪಕ್ಕಗಳಿಂದ ಹಾರುವೆ ನಾನು.
ಪ್ರೇಮದ ಶಕ್ತಿಯಿಂದ ಪುಟಿಯುವೆ ನಾನು.

ಹೃದಯದ ಹಗ್ಗ ಹೊಸೆದು ಹಾರುವೆ,
ಕರುಳಿನ ಕೋಲು ಹಿಡಿದು ಜಿಗಿಯುವೆ.

೨ನೆ:— ( ಚಳಿದೂಗಿ ) ಸರಿ; ಯೋಗ್ಯವಿದೆ, ಕಾಮೀ, ಯೋಗ್ಯವಿದೆ. ಇಷ್ಟೆಲ್ಲ ಮಾಡಿ ಮದಿವೆಯಾದ ಮೇಲೆ ಅಲ್ಲವೆನ್ನುವ ಧೈರ್ಯ ಯಾವನದು? ಆದರೂ—ಒಂದು ಹೇಳ ನಿನ್ನ ಹಗ್ಗ–ಕೋಲುಗಳು ಕೈಗೆ ನಿಲುಕಲಿಕ್ಕಿಲ್ಲ. ನಿಚ್ಚಣಿಕೆ ಒಂದಿರಲಿ.

ಕಾಮಿ:— ( ಕಳಕಳಿಯಿಂದ ) ನನ್ನ ನಿಶ್ವಾಸಗಳ ನಿಚ್ಚಣಿಕೆ ನಿಲ್ಲಿಸುವೆ.

೨ನೆ:— ಆದರೂ ಹೆದರಿಕೆಯಿಂದ-ಅಲ್ಲಲ್ಲ–ಪ್ರೇಮದ ಕಕ್ಕಸದಿಂದ ನಿಶ್ವಾಸವೆ ಒಮ್ಮೊಮ್ಮೆ ನಿಲ್ಲಬಹುದು. ಆದ್ದರಿಂದ ನಿಚ್ಚಣಿಕೆಯೊಂದಿರಲಿ.

ಕಾಮಿ:— ( ಸಮಾಧಾನದಿಂದ ) ಇರಲಿ ಎಂದರೆ ಇರಲಿ. ಪ್ರೇಮಕ್ಕೆ ಹಟವಿಲ್ಲ— ಅಂದರೆ ಬೇಡೆನ್ನುವ ಹಟವಿಲ್ಲ. ( ಉಸುರ್ಗರೆಯಲು ಬಾರದೆ ಕಣ್ಣೀರು ತಂದು ) ಗೆಳೆಯರಿರಾ ನನಗೆ........

೧ನೆ:— ನನಗಂತೂ ಹೆದರಿಕೆ ಬರುವದು.

೨ನೆ:— ಗೆಳೆತನದಲ್ಲಿ ಹೆದರಿಕೆಯಿಲ್ಲ. ಕಾಮೀ, ( ಕಳಕಳಿಯಿಂದ) ನೀನು ಎಲ್ಲಿಯೊ ಓದಿ ತೋರಿಸಲಿಲ್ಲವೆ? ಅದರಂತೆ ಕಾಮನು ನಿನ್ನನ್ನು ಸಕಾಮ ಮಾಡಲಿ. ಸುಮುಹೂರ್ತ—

ಕಾಮಿ:— ಇನ್ನು ಸುಮುಹೂರ್ತದಲ್ಲಿಯೆ ನಿಮ್ಮೆಲ್ಲರ ಬೆಟ್ಟಿ. ( ಹೋಗುವನು ).

೧ನೆ:— ( ಉಸುರ್ಗರೆದು, ಹೆದರಿಕೆಯಿಂದ ) ಏನಾಗುವದೊ ಏನೊ ?

೨ನೆ.— ಆಗುವದೇನು, ನಡೆ. ಪ್ರೇಮವು ಎಷ್ಟೋ ಸಲ ಹೇಡಿ ಇರುವದು. ಕಾಮಿಯು ಎಲ್ಲಿಯೂ ಹೋಗುವದಿಲ್ಲ. ಮನೆಗೆ ಹೋಗುವ, ಎರಡು ಕವಿತೆ ಬರೆಯುವ, ತಲೆ ಗಿಂಬು ಮಾಡಿ ಮಲಗುವ. ನಡೆ. ( ಮುಂದೆ ನೋಡಿ ) ಅದೋ, ನೋಡು. ಯಾರನ್ನೋ ಎಳೆಯುತ್ತ ನಮ್ಮ ಒಂಟರು ಬರುತ್ತಿರುವರು ತಡೆ. ( ೩ನೆಯವನೂ ೪ನೆಯವನೂ ಅಪ್ಪಾಜಿಯ ಕೈ ಹಿಡಿದುಕೊಂಡು ಬರುವರು ).

೩ನೆ:- ನಾಚುವಿರೇಕೆ ನಡೆಯಿರಿ.

ಅಪ್ಪಾಜಿ:- ( ಕೈ ಬಿಡಿಸಿಕೊಂಡು ) ನಾಚಿಕೆ? ನಾಚುತ್ತಿದ್ದರೆ ದೇಶವನ್ನೆಲ್ಲ ತಿರುಗಿ ಬರುತ್ತಿದ್ದೆನೆ ?

೪ನೆ:— ದೇಶವನ್ನೆಲ್ಲ ತಿರುಗಿದರೂ ಕೆಲಸ ಆಗಲಿಲ್ಲ, ಒಂದೇ ನಾಚಬಹುದು.

ಅಪ್ಪಾಜಿ— ( ಆರ್ಭಟದಿಂದ ) ನಾಚಿಕೆ–ಗೀಚಿಕೆ ಇಲ್ಲ ನನಗೆ. ಆದರೆ ನನ್ನನ್ನು ನೀವು ಎಲ್ಲಿಗೆ ಎಳೆಯುತ್ತಿರುವಿರೆಂಬ ಹೆದರಿಕೆ.

೩ನೆ:— ಎಲ್ಲಿಗೆ ಏನು ? ಕಾಮಿಗೆ ನಿಮ್ಮನ್ನು ತೋರಿಸುವೆವು.

೨ನೆ:— ( ನಿಂತಲ್ಲಿಯೆ ) ಆದರೆ ಕಾಮಿಯು— ( ೪ನೆ. ನು ಕೈಸನ್ನೆ ಮಾಡಲು ತಡೆಯುವನು ).

೪ನೆ:— (ಅಪ್ಪಾಜಿಗೆ) ಕಾಮಿಯು ನಿಮ್ಮನ್ನು ನೋಡಲಿ. ಹುಡುಗೆಯು ತಂದೆಯು ಅಳಿಯನಾಗುವವನನ್ನು ನೋಡುವ ರೂಢಿಯು ಇದುವರೆಗೆ ಇದ್ದಿತು. ಆದರೆ ( ಹೆಮ್ಮೆಯಿಂದ ) ಸಮಾಜದ ಪದ್ಧತಿಗಳಲ್ಲಿ ಉತ್ಕ್ರಾಂತಿಯನ್ನು ಮಾಡುವವರಿದ್ದೇವೆ ನಾವು. ಆ ಹಳೆಯ ಪದ್ಧತಿಗಳೆಲ್ಲ ಹೋದವು ಹಳಸಿ. ಇಂದಿನಿಂದ ಮದುವೆಯಾಗುವವನು ಮಾವನಾಗುವವನನ್ನು ನೋಡುವನು. ( ೩ನೆ. ನಿಗೆ ) ನೀನು ಇವರ

ಕೂಡ ಇಲ್ಲಿಯೆ ನಿಲ್ಲು. ನಾನು ಕಾಮಿಗೆ ತಿಳುಹಿಸುವೆ. ( ಎಂದು ೧ನೆ. ನ ಕಡೆಗೆ ಬಂದು ಏನನ್ನೊ ಮೆಲ್ಲಗೆ ಹೇಳುವನು. ೧ನೆ. ನು ಮುಗುಳುನಗೆಯಿಂದ ತಲೆದೂಗುವನು ).

೩ನೆ:— ( ಅಪ್ಪಾಜಿಗೆ ) ಅದೊ, ಅವನೇ ಕಾಮಿ, ( ೧ನೆ. ನ್ನ ತೋರಿಸುವನು ). ಅವನು ಸಹಸಾ ಯಾರಿಗೂ ಬೆಟ್ಟಿ ಕೊಡುವದಿಲ್ಲ. ನಿಮ್ಮಂತಹರ ಕೂಡ ತಾನಾಗಿಯೆ ಮಾತನಾಡುವದಿಲ್ಲ.

ಅಪ್ಪಾಜಿ:— ( ಸಂಶಯದಿಂದ ) ಯಾಕೆ ?

೩ನೆ:— ನಮ್ಮ ಕಾಮಿಯು ಕವಿ ಇರುವನು. ಎರಡನೆಯು ಗಂಡಸರ ಕೂಡ ಮಾತನಾಡುವದಿಲ್ಲ.

ಅಪ್ಪಾಜಿ:— ( ಆಶ್ಚರ್ಯದಿಂದ ) ಹೀಗೊ ?

೩ನೆ:— ಇದಲ್ಲದೆ ಹೆಣ್ಣುಮಕ್ಕಳ ತಂದೆಯರದೊಂದು ಬೇರೆ ಜಾತಿ ಇದೆಯೆಂದು ಅವನ ಅಭಿಪ್ರಾಯ.

ಅಪ್ಪಾಜಿ:— ( ಸಂಶಯದಿಂದ ) ಅಂದರೆ ನಾನು ಮಾತನಾಡುವದು ಹೇಗೆ ?

೩ನೆ:— ನೀವು ನಮಗೆ ಹೇಳಿರಿ, ನಾವು ಅವನಿಗೆ ಹೇಳುವೆವು. ( ೧ನೆಯವನು ಕುಳಿತುಕೊಳ್ಳುವನು. ೨ನೆ. ನೂ ೪ನೆ. ನೂ ಅವನ ಎಡುಬಲಕ್ಕೆ ಕೊಂಚ ಅಂತರದಿಂದ ಕುಳಿತುಕೊಳ್ಳುವರು ). ಅದೊ, ಒಡ್ಡೋಲಗವು ಕುಳಿತಿದೆ, ನಡೆಯಿರಿ. ( ಎಂದು ಇಬ್ಬರೂ ಮಿಕ್ಕವರ ಹತ್ತಿರ ಬರುವರು. ಮೂರನೆಯವನು ತಾನು ಕುಳ್ಳಿರಿಸಿ ಅಪ್ಪಾಜಿಗೆ ಕುಳಿತುಕೊಳ್ಳಲು ಕೈಸನ್ನೆ ಮಾಡುವನು. ಅಪ್ಪಾಜಿಯು ಆಶ್ಚರ್ಯದಿಂದಲೂ ಹೆದರಿಕೆಯಿಂದಲೂ ಎಲ್ಲರ ಕಡೆಗೆ ನೋಡುತ್ತ ಕುಳಿತುಕೊಳ್ಳುವನು; ೧ನೆ. ನ ಕಡೆಗೆ ನೋಡುವಷ್ಟರಲ್ಲಿ ಅವನು ಒಮ್ಮೆಲೆ ಕಣ್ಣು ಮುಚ್ಚುವನು. ಕೆಲಹೊತ್ತು ಯಾರೂ ಮಾತನಾಡುವದಿಲ್ಲ. ಕೊನೆಗೆ ಕಣ್ಣು ಮುಚ್ಚಿಯೆ— )

೧ನೇ— ಈ ಸಭೆಯಲ್ಲಿ ಯಾರೊ ಹೊಸಬರಿರುವರೆಂದು ನನಗೆ ಕಲ್ಪನೆಯಾಗಿದೆ, ಕಲ್ಪನೆ. ಅವರು ಯಾರು ?

೩ನೇ— (ಆದರಯುಕ್ತವಾಗಿ, ಅಪ್ಪಾಜಿಗೆ) ನೋಡಿದಿರಾ ಕವಿಯ ಕಲ್ಪನಾಶಕ್ತಿಯನ್ನು !

೪ನೇ— (ನಮ್ರತೆಯಿಂದ) ಕಾವಿೀ, ಸಮಾಜದ ಪ್ರಗತಿಯನ್ನು ಜಗಿದು ಕಟ್ಟುವ ಹೆಬ್ಬಾವು ಅವರು.

ಅಪ್ಪಾಜಿ— ಅಲ್ಲ— (ಸಿಟ್ಟಿನಿಂದ) ಅಲ್ಲ, ನಾನೊಬ್ಬ ಹೆಣ್ಣುಮಗಳ ತಂದೆ.

೩ನೇ— ಸಮಾಧಾನ, ಕೊಂಚ ಸಮಾಧಾನ ತಾಳಿ. ಅಂತಹರಿಗಯೆ ಹೆಬ್ಬಾವು ಎಂದು ಈ ಸಭೆಯ ಪಾರಿಭಾಷಿಕ ಶಬ್ದ.

೪ನೇ— ಆದರ ಹೆಡೆಯಲ್ಲಿ ಮಣಿಯೊಂದು ಇದೆಯಂತೆ. ಅದನ್ನು ನೀನು ಸ್ವೀಕರಿಸಬೇಕಂತೆ. ಸಾರಾಂಶ ಅವರಿಗೊಬ್ಬ ಹೆಣ್ಣುಮಗಳು ಇರುವಳಂತೆ. ಆ ಗಂಡಾಂತರದಿಂದ ಪಾರು ಮಾಡೆಂದು ಕೈಮುಗಿದ "ಬೆಪ್ಪಾಜಿ"ಯಿವರು.

ಅಪ್ಪಾಜಿ— (ಸಿಟ್ಟಿನಿಂದ) ಛೆ, ಇದೇನು ಹುಡುಗಾಟಿಕೆ !

೨ನೇ— (ಆಕಾಶದ ಕಡೆಗೆ ನೋಡುತ್ತ) ಸಂಸಾರವೇ ಹುಡುಗಾಟಿಕೆಯಲ್ಲವೆ ? ಇಂತಹ ಹುಡುಗಾಟಿಕೆಯಿಂದಲೆ ಸಂಸಾರವು ಅನಾದ್ಯನಂತವಾಗಿ ಸಾಗಿದೆಯಲ್ಲವೆ ?

೧ನೇ— (ಗಂಭೀರವಾಗಿ) ಗೆಳೆಯರಿರಾ, ನಮ್ಮಂತಹ ಕವಿಗಳು ಸಹಸಾ ಕಣ್ಣಿಗೆ ಬಿದ್ದದ್ದನ್ನೆಲ್ಲ ನೋಡಿ ತಮ್ಮ ದೃಷ್ಟಿ ಶಕ್ತಿಯನ್ನು ಹಾಳುಮಾಡಿಕೊಳ್ಳುವದಿಲ್ಲೆಂದು ಹೇಳಿರಿ. ನೋಡುವಂತಹದನ್ನಷ್ಟೆ ನೋಡುವರೆಂದು ಹೇಳಿರಿ. ಗೆಳೆಯರಿರಾ, ಅನಾಯಾಸವಾಗಿ ನೀವು ಕಣ್ಣು ತೆರೆದಿರು

ವಿರಿ. ನೋಡುವಂತಹ ವಸ್ತು ಇದೆಯೊ ಹೇಗೆ ನೋಡಿರಿ. ಆ ಮೇಲೆ ನಿಮ್ಮ ಕಾಯಿಯು ಕಣ್ಣು ತೆರೆಯುವನು.

ಅಪ್ಪಾಜಿ:— (೩ನೆ. ನ ಕಿವಿಯಲ್ಲಿ ಏನೋ ಹೇಳುವನು).

೩ನೆ:— ಕಾಯೀ, ಅವರದೊಂದು ಸಂಶಯವಿದೆ.

೧ನೆ:— ಅಂತಹವರದು ಯಾವಾಗಲೂ ಸಂಶಯದ ಸ್ವಭಾವವೇ. ಇರಲಿ, ಸದ್ಯದ ಸಂಶಯ ಯಾವದು?

೩ನೆ:— ಹುಡುಗೆಯನ್ನು ಬಿಟ್ಟು ಹುಡುಗೆಯ ತಂದೆಯನ್ನು ನೋಡುವ ಪದ್ಧತಿಯ ಅರ್ಥವೇನು ಎಂದು ಅವರ ಸಂಶಯ.

೧ನೆ:— (ಮುಗುಳುನಗೆಯಿಂದ) ನನ್ನ ಪ್ರತಿಭೆಯ ಪರಿಗಳೇ, ಸಾವಕಾಶವಾಗಿ, ಸಮಾಧಾನದಿಂದ, ನೀವೇ ಒಬ್ಬೊಬ್ಬರಾಗಿ ಉತ್ತರ ಕೊಡಿ, ನೋಡುವ.

೨ನೆ:— (ಕೆಮ್ಮಿ ಎಲ್ಲರ ಕಡೆಗೆ ನೋಡಿ) ಮೊದಲನೆಯ ಕಾರಣ. ಹುಡುಗೆಯ ತಂದೆಯೆಂದರೆ ಹುಡುಗೆಯಕಿಂತ ಮುಂಚೆ ಹುಟ್ಟಿದವನು; ಅಲ್ಲವೆ? ಕ್ರಮದಿಂದ ಕೆಲಸ ಮಾಡ ಬೇಕಾದರೆ ತಂದೆಯನ್ನೆ ಹುಡುಗೆಗಿಂತ ಮೊದಲು ನೋಡ ಬೇಕಲ್ಲವೆ?

ಅಪ್ಪಾಜಿ:— (ಸಿಟ್ಟಿನಿಂದ) ಯಾಕೆ, ತಂದೆಯ ತಂದೆಯನ್ನು ಅದಕ್ಕಿಂತ ಮುಂಚಿತವಾಗಿ?

೩ನೆ:— ತಂದೆಯ ತಂದೆ ಅಪ್ರಾಸಂಗಿಕ. ಅವನು ಹುಡುಗೆಯೂ ಅಲ್ಲ, ಹುಡುಗೆಯ ತಂದೆಯೂ ಅಲ್ಲ. ಇದಲ್ಲದೆ ಇನ್ನೊಂದು ಮಹತ್ವದ ಕಾರಣವಿದೆ. ವರದಕ್ಷಿಣೆಯನ್ನು ಕೊಡುವವರು ಯಾರು? ಹುಡುಗೆಯೆ? ಎಂದಿಗೂ ಅಲ್ಲ. ಹುಡುಗೆಯ ತಂದೆಯೆ? ಯಾವಾಗಲೂ ಅಹುದು.

ಹೀಗೆ ಹೊಸ ಸಂಸಾರದ ಮೂಲಬೀಜವಾದ ವರದಕ್ಷಿಣೆ ಯನ್ನು ಕೊಡುವವನನ್ನೆ ಮೊದಲು ನೋಡಬೇಕಲ್ಲವೆ?

ಳನೆ:— ಇದಲ್ಲದೆ ಇನ್ನೊ ಒಂದು ಮಹತ್ವದ ಕಾರಣವಿದೆ. ತಂದೆ-ಮಗಳೆಂದರೆ ಒಂದೇ ರಕ್ತ, ಒಂದೇ ಸ್ವಭಾವ, ಒಂದೇ ಬುದ್ಧಿ, ಒಂದೇ ಗುಣ; ಅಲ್ಲವೆ? ಇವಿನ್ನೂ ಚಿಕ್ಕ ಹುಡುಗೆಯಲ್ಲಿ ಒಡೆದು ಕಾಣುವಂತೆ ಬೆಳೆದಿರುವ ದಿಲ್ಲ. ಬೆಳೆದರೆ ಹೇಗೆ ಕಾಣಿಸುವವೆಂಬುದು ಬೆಳೆದ ತಂದೆ ತಾಯಿಗಳಿಂದಲೆ ತಿಳಿದುಬರುವದಿಲ್ಲವೆ?

ಅಪ್ಪಾಜಿ:— (ಸಂಶಯದಿಂದ) ಹಾಗಾದರೆ ತಾಯಿಯನ್ನು ಕೂಡ ನೋಡುವವರೇನು ನೀವು?

ಳನೆ:— (ತಲೆದೂಗಿ) ನಿಃಸಂಶಯವಾಗಿ. ತಾಯಿಯ ಸ್ವಭಾವ, ತಾಯಿಯ ಆರೋಗ್ಯ, ತಾಯಿಯ ರೂಪ—

ಅಪ್ಪಾಜಿ:— (ಸಿಟ್ಟಿನಿಂದ) ಸಾಕು ನಿಮ್ಮ ಪಾಂಡಿತ್ಯ. (ಎದ್ದು) ಮದಿವೆ ಆಗತಕ್ಕ ಹೆಣ್ಣುಮಕ್ಕಳಿಗಿಂತ ಮದಿವೆ ಆದ ಹೆಣ್ಣುಮಕ್ಕಳನ್ನು ನೋಡುವದೇ ನಿಮ್ಮ ಹೌಸು; ಅಲ್ಲವೆ? ಅಯ್ಯೋ, ಮೋಸ ಹೋದೆ. ನಾನು ಹುಚ್ಚ, ನಾನು ದಡ್ಡ, ಇಲ್ಲಿ—

ಳನೆ:— ಅಂದರೆ! ನಿಮ್ಮ ಮಗಳು ಹುಚ್ಚ, ನಿಮ್ಮ ಮಗಳು ದಡ್ಡ ಎಂದಂತಾಯಿತು. (ನಕ್ಕು) ರೋಗಗಳಂತೆ ಗುಣಗಳಾದರೂ ಸಾಂಸರ್ಗಿಕವಿರುವವು.

ಅಪ್ಪಾಜಿ:— (ಸಿಟ್ಟಿನಿಂದ) ನಿಮ್ಮ ಹುಚ್ಚತನ ಸಾಂಸರ್ಗಿಕವಿದೆ. ಹೆಣ್ಣು ಮಗಳ ತಂದೆಯ ಕೂಡ ಹುಡುಗಾಟಿಕೆ ಮಾಡಿದ ಸಂಸರ್ಗದಿಂದ ನಿಮ್ಮೆಲ್ಲರಿಗೂ ಹೆಣ್ಣುಮಕ್ಕಳು ಹುಟ್ಟಲಿ. (ಹೋಗುವನು).

೧ನೆ:— ( ಕಣ್ಣು ತೆರೆದು ) ಏನೇ ಇರಲಿ, ಇವನ ಶಾಪದೊಳಗೆ ನಮ್ಮ ಮದಿವೆ ಆಗಲಿ ಎಂಬ ಆಶೀರ್ವಾದ ಇದೆ. ( ಎಲ್ಲರೂ ನಗುತ್ತ ಏಳುವರು ). ( ಹೆದರಿಕೆಯಿಂದ ) ಅಯ್ಯೋ, ನಮ್ಮ ಹುಡುಗಾಟಿಕೆ ಹಾಳಾಗಲಿ. ಕಾವಿಯ ಸ್ಥಿತಿಯು—

೩ನೆ:— ( ಒಮ್ಮೆಲೆ ) ಯಾಕೆ ? ಏನಾಗಿದೆ ಕಾವಿಗೆ ?

೨ನೆ:— ಸದ್ಯಕ್ಕೆ ಏನೂ ಆಗಿಲ್ಲ. ಆಗುವದೆಲ್ಲ ನಾಳೆ ಮುಂಜಾವಿನೊಳಗಾಗಿ. ಹೇಳುವೆ ನಡೆಯಿರಿ. (ಎಲ್ಲರೂ ಹೋಗುವರು).



## ಪ್ರವೇಶ ೪

( ಮಧ್ಯರಾತ್ರಿ. ಹರಿಹರರಾಯನ ಮನೆಯಲ್ಲಿ ಒಂದು ಮಲಗುವ ಕೋಣೆ. ರಂಗಭೂಮಿಯಲ್ಲಿ- ಪ್ರೇಕ್ಷಕರ ಎಡಬದಿಗೆ-ಒಂದು ಮಂಚ. ಅವರ ಮೇಲೆ - ಹಾ, ಸಪ್ಪಳ ಬೇಡ. ಯಾರಿವರು ಮಲಗಿದವರು? ಪ್ರೇಕ್ಷಕರೆ, ಜಾಗ್ರತೆ. ಇದುವರೆಗೆ ನಿಮ್ಮನ್ನು ಹರಿಹರರಾಯನ ಮನೆಯಲ್ಲಿ ಎಲ್ಲ ಕಡೆಯೂ ಕರೆದುಕೊಂಡು ಹೋಗಿರುವೆವು. ಈಗ್ಗೆ ಮಾತ್ರ ನಿಮ್ಮನ್ನು ಈ ಕೋಣೆಯಲ್ಲಿ ಕರೆಯಲು ನಮಗೆ ಅಧೈರ್ಯ. ಮಧ್ಯರಾತ್ರಿಯೆಂದೊ? ಅಲ್ಲ. ಇಂತಹ ಮಧ್ಯರಾತ್ರಿಗಳನ್ನು ದಿನಾಲು ನೋಡಿರುವೆವು. ಆದರೆ ಸದ್ಯಕ್ಕೆ ಕಾಣುವದು ಎಂದಿಗೂ ನೋಡಲಾರದ, ಎಂದಿಗೂ ನೋಡಬಾರದ ನೋಟ. ಮಲಗಿದವಳು ಹೆಣ್ಣುಮಗಳು. ಆದೇಕೆ? ಬಲಮಗ್ಗುಲಾಗಿ ಮಲಗಿಕೊಂಡು ಬಲಗೈಯನ್ನು ಮುಂದೆ ಚಾಚಿದ್ದು ಅದು ನಾವು ಗುರುತುಹಿಡಿಯುವಂತಹ ಕೈಯ್ಯು ಮನೋರಮೆಯ-ಹರಿಹರರಾಯನ ಹೆಂಡತಿಯ-ಕೈಯ್ಯು. ಕಾರಣ ಎಚ್ಚರಿಕೆ. ಸದ್ಯಕ್ಕೆ ಈ ಕೋಣೆಯಲ್ಲಿ ಹಬ್ಬಿದ ಶಾಂತತೆಯು ನಿಮ್ಮ ಮನಸ್ಸಿನಲ್ಲಿಯೂ ಇದ್ದರೆ ಮಾತ್ರ ನಮ್ಮ ಕೂಡ ಒಳಗೆ ಬನ್ನಿ. ದೀಪವು ಮಿಣುಮಿಣುಕಾಗಿ ರಂಗಭೂಮಿಯ ಬಲಕ್ಕೆ ಉರಿಯಹತ್ತಿದೆ. ಪ್ರೇಕ್ಷಕರ ಎದುರಿನ ಗೋಡೆಗೆ ಒಂದು ಬಾಗಿಲು. ಆ ಬಾಗಿಲಿನಿಂದ ನಾವು ಹೊರಗೆ ನೋಡಲಾಗಿ ಇದು ಮೇಲುಪ್ಪರಿಗೆಯ ಕೋಣೆಯೆಂದು ತಿಳಿದುಬರುವದು. ಕೋಣೆಗೆ ಒಂದೇ ಕಿಟಕಿ, ನಮ್ಮ ಬಲಕ್ಕೆ. ಆದರೆ ದೀಪಕ್ಕೆ ಗಾಳಿ ತಗಲಬಾರದೆಂದೇ ಅದನ್ನು ಮುಚ್ಚಿರಬಹುದು. ಏನೂ ಸದ್ದಿಲ್ಲ. ಇದೇನು? ಯಾರೋ ಉಸುರಾಡಿಸುವ ಶಬ್ದ. ಕೆಳಗಿನಿಂದ ಮೇಲೆ ಬರುತ್ತಿರುವರಲ್ಲವೆ? ಸ್ವಲ್ಪ ಮರೆಯಾಗಿ ನಿಲ್ಲುವಾ. ಓಹೊ, ಕಾಮಿ. ಕುಂಬಿಯಿಂದ ಮೆಲ್ಲಗೆ ಕಾಲು ಇಳಿಬಿಟ್ಟು ಕಾಮಿಯು ಮೇಲೆ ಬರುವನು. ಕೊಡಲೆ ಮೊದಲು ಹಿಂದೆ, ತರುವಾಯ ಎಡಬಲಕ್ಕೆ ಯಾರಾದರೂ ಇರುವರೇನೊ ಎಂಬ ಹೆದರಿಕೆಯಿಂದಲೂ ಸಂಶಯದಿಂದಲೂ ಕಕ್ಕಾವಿಕ್ಕಿಯಾಗಿ ನೋಡುವನು. ತನ್ನನ್ನು ಯಾರೂ ನೋಡಲಿಲ್ಲವೆಂಬ ಸಮಾಧಾನದಿಂದ ಒಳಗೆ ಬರುವನು. ಆನಂದದಿಂದ ಮಂಚದ ಕಡೆಗೆ ನೋಡಿ, ಕೋಣೆಯ ಮಧ್ಯದಲ್ಲಿ ನಿಂತುಕೊಂಡು, ತನ್ನ ಅಂಗಿ-ದೋತರಗಳನ್ನು ಸರಿ ಮಾಡಿಕೊಂಡು, ಎರಡೂ ಕೈಗಳನ್ನು ತುರಿಸುತ್ತ, ವಿಚಾರ ಮಾಡುವವನಂತೆ ನಿಲ್ಲುವನು; ಉಸುರ್ಗರೆಯುವನು; ಕೊನೆಗೆ ಮುಗುಳುನಗೆ ನಕ್ಕು— )

ಕಾಮಿ:— ಛೆ, ಈ ಪ್ರೇಮದಾಟವೆಂದರೆ ಡೊಂಬರಾಟವಿದ್ದಂತೆ. ಹೆಗಲ ಮೇಲೆ ನಿಚ್ಚಣಿಕೆ ಇಟ್ಟುಕೊಂಡು ಮನೆ–ಮನೆ ತಿರುಗಬೇಕು. ಆ ನಿಚ್ಚಣಿಕೆಯಾದರೂ ಎಂತಹದು ! ಎಲ್ಲ ಹಲ್ಲುಗಳಿದ್ದರೂ ಮುದುಕನಂತೆ ಗದಗದ ನಡಗು ವದು. ( ನಕ್ಕು ) ನಾನು ನಡಗುವೆನೊ, ನಿಚ್ಚಣಿಕೆ ನಡ ಗುವದೊ ಮೊದಲು ನನಗೆ ತಿಳಿಯುಲೇ ಇಲ್ಲ. ಅಯ್ಯೊ, ಕಾಮೀ, ಮೊದಲಿನ ಯುಗಗಳಲ್ಲಿಯಾದರೂ ಹುಟ್ಟ ಬಾರದಾಗಿತ್ತೆ ? ಅಂದರೆ ಸುಲಭವಾಗಿ ಪ್ರೇಮದಲ್ಲಿ ಬೀಳಲು ಬರುತ್ತಿತ್ತು. ಸತ್ತ ಮೀನ ಹೊಡೆಯುವದು, ಸುಂದರಿಯ ಕೈ ಹಿಡಿಯುವದು. ಸೊಟ್ಟ ಬಿಲ್ಲು ಮುರಿ ಯುವದು, ಯುವತಿಗೆ ಮೆಚ್ಚಿ ಮೆರೆಯುವದು. ಛೆ, ಆಗಿನ ಸೌಕರ್ಯ ಇನ್ನು ಒದಗುವಂತಿಲ್ಲ. ನೋಡಬಾರದೆ ನನ್ನದೇ ಗೋಳು! ಕುಂಬಿಯ ಮೇಲೆ ಒಂದು ಕಾಲಿಟ್ಟು ಕೆಳಗೆ ನಿಚ್ಚಣಿಕೆ ನೋಡುವಾಗ್ಗೆ, ಮತ್ತೊಂದು ಕಾಲು ತಾಕಿ ಆ ನಿಚ್ಚಣಿಕೆಯೆ ಬಿದ್ದು ಹೋಗಬೇಕೆ? ( ಅಭಿಮಾನ ದಿಂದ) ಆಹಾ, ಬಹಳೇ ಒಳಿತು. ಸೂರ್ಯನು ಸಮುದ್ರ ದಲ್ಲಿ ಬಿದ್ದು ಗುಂಗೀಹುಳವು ಕಮಲದಲ್ಲಿ ಸಿಕ್ಕಂತೆ, ನಿಚ್ಚಣಿಕೆ ಕೆಳಗೆಬಿದ್ದು ನಾನು ಪ್ರೇಮಮಂದಿರದಲ್ಲಿ ಸಿಕ್ಕಿರುವೆ. ಮೋಹಿನಿ! ಮೋಹಿನಿ! ಆನಂದದಿಂದ ಕುಣಿಯುವಂತಾಗಿದೆ. ( ಎಂದು ತಲೆಯ ಮೇಲೆ ಎರಡೂ ಕೈಗಳನ್ನಿಟ್ಟು ಕುಣಿಯುವವನಂತೆ ಹಾಸಿಗೆಯ ಹತ್ತಿರ ಹೋಗಿ ಮನೋರಮೆಯನ್ನು ನೋಡಿ ಒಮ್ಮೆಲೆ ಗಾಬರಿಯಾಗಿ ನಡಗುತ್ತ ಹಿಂದೆ ಸರಿದು ಕೋಣೆಯ ಮಧ್ಯದಲ್ಲಿ ಬಂದು ನಿಂತು ) ಅಯ್ಯೊ, ನನ್ನ ಕುಣಿತ ಭಸ್ಮಾಸುರನ ಕುಣಿತವಾಯಿತು. ತಲೆಯು

ಮೋಲಿನ ಕೈ ಸುಡಹತ್ತಿದೆ; ಎದೆಯು ಹಾರಹತ್ತಿದೆ. ಇನ್ನೇನು ಗತಿ? ಭಸ್ಮಾಸುರನು ಸುದೈವಿ; ಮೋಹಿಸಿದು ಕಣ್ಣುಮುಂದೆಯೆ ಸತ್ತನು. ಆದರೆ, ದುರ್ದೈವಿ ಕಾಮೀ, ಎಡಹನೆಯುವರ ಹೆಂಗಸರ ಮುಂದೆ ಸಾಯುವ ಸ್ಥಿತಿ ಒಂದಿತೆ ನಿನಗೆ? ( ಬಲಬದಿಗೆ ನೋಡಿ ಹೆದರಿ ) ಅಯ್ಯೋ, ಬಾಗಿಲ ನಪ್ಪಳ. ಊರೊಳಗಿನ ನಾಟಕ ಮುಗಿಯಿತು, ನಮ್ಮ ನಾಟಕ ಪ್ರಾರಂಭವಾಯಿತು. ( ಸುಳ್ಳು ಧೈರ್ಯದಿಂದ ಅಥವಾ, ಹೆದರಿಕೆ ಯಾಕೆ? ಹಾದಿ ತಪ್ಪಿ ಬಂದಿರುವೆನೆಂದು ಹೇಳುವೆ. ಇಲ್ಲವೆ, ಸೋಗು ಹಾಕುವೆ. ನಾನು ಕಾಮಿಯಲ್ಲ. ಕಾಮಿಯು ಆತ್ಮಾ, ಕವಿಯು ಸ್ಫೂರ್ತಿ, ಅನುಭವಕ್ಕಾಗಿ ಸಂಚರಿಸುವೆ ಎಂದು ಹೇಳುವೆ. ಅನುಭವವಾದರೂ ಹೇಳುವಂತಹದೆ ಆಗುವದು. ಅಯ್ಯೋ ( ಎಂದು ಮಂಚದ ಹಿಂದೆ ಮರೆಯಾಗಿ ಕುಳಿತುಕೊಳ್ಳುವನು. ಮನೋರಮೆಯು ಎಚ್ಚರಾಗುವಳು. ಗಾಬರಿಯಿಂದ "ಯಾರು" ಎನ್ನುವಷ್ಟರಲ್ಲಿ ವಿದ್ಯಾಧರನು ಬರುವನು ).

ವಿದ್ಯಾಧರ:— ( ಮೆಲ್ಲಗೆ ) ನಾನು. ಒದರಬೇಡ.

ಮನೋರಮೆ:—( ಒಮ್ಮೆಲೆ ಎದ್ದು ಕುಳಿತು ಯಾರು ? ( ಎಂದು ಕಣ್ಣು ಒರೆಸಿಕೊಳ್ಳುವಳು ).

ವಿದ್ಯಾಧರ:— ( ದೀಪವನ್ನು ಎತ್ತರಿಸಿ ಎದುರು ನಿಂತು ) ನಾನು – ನಾನೇ ( ಹತ್ತಿರ ಬಂದು ) ಎಲ್ಲಿದೆ ?

ಮನೋರಮೆ:—( ಹಾಸಿಗೆಯಿಂದ ಕೆಳಗಿಳಿದು ಸೀರೆ ಸಾವರಿಸಿಕೊಳ್ಳುತ್ತ ) ಏನು ?

ವಿದ್ಯಾಧರ:— ( ಕೊಂಚ ಕೋಪದಿಂದ ) ಹೊತ್ತು ಕಳೆಯಬೇಡ. ಏನು ? ಈ ಬುದ್ಧಿಗೇಡಿಯ ಸೋಗು........

ಮನೋರಮೆ:—( ವಿಷಾದದಿಂದ ) ಬುದ್ಧಿಗೇಡಿಯ ಸೋಗು ಅಲ್ಲ. ನಾನು

ಎಚ್ಚರಾಗಿರುವೆ. ವಿದ್ಯಾಧರಾ, ನಾನು ಬುದ್ಧಿಗೇಡಿಯೆ ಅಲ್ಲವೆ ?

ವಿದ್ಯಾಧರ:— ನಿನ್ನ ಬುದ್ಧಿಯ ಪರೀಕ್ಷೆ ಬೇಡ, ನನ್ನ ಸಿಟ್ಟಿನ ಪರೀಕ್ಷೆ ಬೇಡ.

ಮನೋರಮೆ:—( ಕನಿಕರದಿಂದ ) ವಿದ್ಯಾಧರಾ, ವಿದ್ಯಾಧರಾ, ನಿನಗೆ ಕೈ ಮುಗಿಯುವೆ. ನಿರ್ದಯನಾಗಬೇಡ. ಡಾಕ್ತರನಂತೆ ಚೂರಿಯಿಂದ ನನ್ನ ಶರೀರ ಚೂರು ಚೂರು ಮಾಡುವ ದಿಲ್ಲವೇಕೆ ನೀನು ?

ವಿದ್ಯಾಧರ:— ನಿನ್ನ ಇಷ್ಟವಿದ್ದರೆ ಹಾಗೆಯೆ ಮಾಡುವೆ. ಆದರೆ ಸದ್ಯಕ್ಕೆ ಇಲ್ಲದ ಪ್ರಶ್ನೆ ಕೇಳಬೇಡ. ನನಗೆ ಉತ್ತರ ಕೊಡು.

ಮನೋರಮೆ:—( ಕ್ರೋಧದಿಂದ ) ನಿರ್ದಯಾ, ಒಂದು ವಚನವನ್ನಾದರೂ ಕೊಡುವಿಯಾ? ನಿನ್ನಂತೆಯೆ ಕೆಲಸವಾದರೆ ನನ್ನದೊಂದು ಕೆಲಸ ಮಾಡುವಿಯಾ? ಹೇಳು, ವಿದ್ಯಾ-(ಕಣ್ಣೀರು ತಂದು) ಧರಾ, ಹೇಳು. ನೀನು ಬೇಡಿದ್ದನ್ನು ಒಪ್ಪಿಸುವೆ; ನಾನು ಕೇಳಿದ್ದನ್ನು ಹೇಳುವಿಯಾ?

ವಿದ್ಯಾಧರ:— ಮೊದಲು ಒಪ್ಪಿಸು, ಆ ಮೇಲೆ ಕೇಳು. (ಅವಸರದಿಂದ ಕೈ ಗಡಿಯಾರವನ್ನು ನೋಡಿ ) ಹೊತ್ತು ಕಳೆಯಬೇಡ.

ಮನೋರಮೆ:—ಹೇಳುವಿಯಾ ? ನನ್ನ ಮನಸ್ಸಿನ ಸಮಾಧಾನವನ್ನು ಮಾಡುವಿಯಾ ? ( ವಿದ್ಯಾಧರನು ಸಿಟ್ಟಿನಿಂದ ತಲೆಮೂಗುವನು. ) ನಿನ್ನ ಮೇಲಿನ ವಿಶ್ವಾಸದಿಂದ ಈ ಅವಿಶ್ವಾಸದ ಕೆಲಸಕ್ಕೆ ನನ್ನ ಮನಸ್ಸನ್ನು ಕಲ್ಲು ಮಾಡುವೆ. ( ಎಂದು ಹಾಸಿಗೆಯ ಬುಡದಿಂದ ಒಂದು ಮುದ್ರಿತ ಕಾಗದವನ್ನು ಕೊಡುವಳು. ಕೊಡಲಿ ವಿದ್ಯಾಧರನು ಹೋಗುವನೆಂಬ ಸಂಶಯದಿಂದ ಎರಡೂ ಕೈಗಳನ್ನು ಚಾಚಿ ಅಡ್ಡಗಟ್ಟುವಳು ).

ವಿದ್ಯಾಧರ:— (ಅವಳನ್ನು ಕೆಲ ಹೊತ್ತು ದಿಟ್ಟಿಸಿ, ನಗೆಯಿಂದ) ಅವಿಶ್ವಾಸದ ಕೆಲಸ ನೀನು ಮಾಡಿದೆಯೆಂದು ನನ್ನ ಮೇಲೆ ಕೂಡ ವಿಶ್ವಾಸವಿಲ್ಲವೆ? ಮನೋರಮಾ, ಈ ಕ್ಷಣದಲ್ಲಿ ಈ ವಿದ್ಯಾಧರನು ನಿರ್ದಯನಲ್ಲ, ನೀಚನಲ್ಲ; ಹುಂ, ಕೇಳುವ ದೇನು?

ಮನೋರಮೆ:—(ಕನಿಕರದಿಂದ) ಕೇಳುವದೇನು? ಆ ಕಾಗದದಿಂದ ನನ್ನ ಸಂಪತ್ತೆಲ್ಲ ಬರುವಂತಿದ್ದರೆ ನಿನಗೆಯೆ ಬರಲಿ. (ಕಣ್ಣೀರು ತಂದು) ವಿದ್ಯಾಧರಾ, ನನ್ನ ಸಂಪತ್ತು ಹೆಂಗಸಿನ ಸಂಪತ್ತು; ಅದನ್ನು ಕೆಡಿಸಬೇಡ, ಅದರಲ್ಲಿ ಕೈ ಹಾಕ ಬೇಡ; ನಿನಗೆ ಸೆರಗೊಡ್ಡಿ ಬೇಡುವೆ.

ವಿದ್ಯಾಧರ:— ನಿನ್ನ ಸಂಪತ್ತು ನನ್ನ ಕಡೆಗೆ ಒಂದಿದ್ದರೆ, ಇದೊ, ಆ ಒಡ್ಡಿದ ಸೆರಗಿನಲ್ಲಿ ಒಗೆದುಬಿಡುವೆ.

ಮನೋರಮೆ:—(ಮೊದಲಿನಂತೆ) ನನ್ನ ಸಂಪತ್ತು ನಿನ್ನ ಕಯ್ಯಲ್ಲಿದೆ, ವಿದ್ಯಾಧರಾ. ಆ ಸುಟ್ಟ ಕಾಗದಿನಲ್ಲಿ ಅಲ್ಲ ಈ ಸುಡುವ ಎದೆಯಲ್ಲಿ ಬರೆದಿದೆ. ಹೇಳು, ವಿದ್ಯಾಧರಾ, ಹೇಳು. ನನ್ನ ವೈಭವವನ್ನು ನನ್ನ ನಲುವಾಗಿ ಕಾಪಾಡುವಿಯಾ?

ವಿದ್ಯಾಧರ:— (ಸಂಶಯದಿಂದ, ಆಶ್ಚರ್ಯದಿಂದ) ಯಾವದು ನಿನ್ನ ವೈಭವ?

ಮನೋರಮೆ:—(ಕನಿಕರದಿಂದ) ಯಾರ ವೈಭವವನ್ನು ನೀನು ಕದಿಯ ಬೇಕೆನ್ನುವಿಯೊ ಅವರೇ ನನ್ನ ವೈಭವ. ಅವರನ್ನು.... ವಿದ್ಯಾಧರಾ.... ವಿದ್ಯಾಧರಾ.... (ಬಿಕ್ಕುತ್ತ) ಅವರನ್ನು ಸುರಕ್ಷಿತವಾಗಿ.... (ವಿದ್ಯಾಧರನು ಖೊಳ್ಳನೆ ನಗುವನು; ಮನೋ ರಮೆಯು ಮೊದಲು ಚಕಿತಳಾಗಿ ಆ ಮೇಲೆ ಸಿಟ್ಟಾಗಿ ಅವನನ್ನು ನೋಡುವಳು).

ವಿದ್ಯಾಧರ:— (ನಗೆ ತಡೆದು) ಅಯ್ಯೊ, ತಿಳಿಯಿತು, ತಿಳಿಯಿತು. ಹರಿಹರ

ರಾಯರ ಶರೀರದ ಸ್ವಾಸ್ಥ್ಯವಲ್ಲವೆ? ಛೆ, ನೋಡಿದಿರಾ! ಗುರುತಿನ ಡಾಕ್ಟರನೆಂದು ಬೇನೆ ಇಲ್ಲದಿದ್ದರೂ ಕೂಡ ಕೇಳುವರು.

ಮನೋರಮೆ:—(ವಿಶ್ವಾಸ ಕೂಡದೆಯೆ) ಬೇ..ನೆ..ಇ..ಲ್ಲ..ದಿ..ದ್ದ..ರೂ......

ವಿದ್ಯಾಧರ:— ಏನಾಗಿದೆ ಹರಿಹರರಾಯರಿಗೆ? ಇನ್ನೂ ಪರೀಕ್ಷಿಸಿ ೧೫ ದಿವಸಗಳಾಗಿಲ್ಲ.

ಮನೋರಮೆ:—(ಆಶ್ಚರ್ಯದಿಂದ) ಏನಾಗಿದೆ? ನೀನೇ....ನೀನೇ ಹೇಳ ಲಿಲ್ಲವೆ?

ವಿದ್ಯಾಧರ:— ಹಗಲು ಹೊತ್ತಿನಲ್ಲಿದ್ದರೆ ಗಟ್ಟಿಗಟ್ಟಿ ನಗುತ್ತಿದ್ದೆ. ನಾನೇ ಹೇಳಿದೆನಲ್ಲವೆ? ಈಗಲಾದರೂ ನಾನೇ ಹೇಳುವೆ; ಹರಿ ಹರರಾಯರಿಗೆ ಏನೂ ಆಗಿಲ್ಲ.

ಮನೋರಮೆ:—(ಆಶ್ಚರ್ಯದಿಂದ) ಏನೂ ಇಲ್ಲ?

ವಿದ್ಯಾಧರ:— ಏನೂ ಇಲ್ಲ....ಏನೇನೂ ಇಲ್ಲ.(ಸ್ಮರಣೆಗೆ ತಂದವನಂತೆ) ಓಹೊ, ಆಗ್ಗೆ ಹೇಳಿದ್ದೆನಲ್ಲವೆ? ಆಗ್ಗೆ ಹೇಳಿದ್ದು ನನ್ನ ರೋಗ, ನನ್ನ ಜ್ವರದ ಬಾಧೆ, ನನ್ನ ಮತ್ಸರದ ಜ್ವರ, ನನ್ನ ನೋಡಿನ ಸಂಕಟ, (ಕೈಯ್ಯೊಳಗಿನ ಕಾಗದವನ್ನು ತೋರಿ ಸುತ್ತ) ಈ ಔಷಧದಿಂದ ಅದೆಲ್ಲ ವಾಸಿಯಾಗಿದೆ; ಅದ ಕ್ಕಾಗಿ ನಿನಗೆ ನಾನು ಕೃತಜ್ಞನಿರುವೆ.

ಮನೋರಮೆ:—(ಅರ್ಧ ತನ್ನಷ್ಟಕ್ಕೆ) ಏನೂ ಇಲ್ಲ! ಇವನು ಹೇಳಿದ್ದು ಸುಳ್ಳು..(ಸಿಟ್ಟಿನಿಂದ) ನೀಚಾ, ಮೋಸಗೊಳಿಸಿದಿಯಲ್ಲವೆ ನನ್ನನ್ನು? ಹಾಳು ಮಾಡಿದಿಯಲ್ಲವೆ ನನ್ನನ್ನು? ತಾಯೀ, ನಾನೆಂತಹ ಹುಚ್ಚಳು! (ಸಂತಾಪದಿಂದ) ಕಿಡಿ ಗೇಡೀ, ನಿನ್ನ ಯಾವ ಮಾತಿನ ಮೇಲೆ ವಿಶ್ವಾಸವಿಡಲಿ?

ವಿದ್ಯಾಧರ:— ನಾಳೆ ಆಸ್ಪತ್ರಿಗೆ ಬಂದಿಯೆಂದರೆ ನಿನಗೊಂದು ವಿಶ್ವಾಸದ

ಔಷಧವನ್ನು ಕೊಡುವೆ. ಸದ್ಯಕ್ಕೆ ನನಗೆ ವೇಳೆಯಿಲ್ಲ, ಕ್ಷಮಿಸು. ನಾನು ಹೋಗುವೆ. (ಹೊರಡುವನು).

ಮನೋರಮೆ:—(ಅಡ್ಡಗಟ್ಟಿ, ತಿರಸ್ಕಾರದಿಂದ) ಹೋಗುವಿಯಾ? ಎಲ್ಲಿಗೆ? ಬಯಲ ಜಗತ್ತಿನಲ್ಲಿ ಕಾಲಿಡುವೆಯಾ? ಇಂತಹಾ ನೀಚ ಕೆಲಸ ಮಾಡಿ ಹೊರಬೀಳಲು ನಿನಗೆ ಧೈರ್ಯ ವಿದೆಯೆ?

ವಿದ್ಯಾಧರ:— (ಆಶ್ಚರ್ಯ ತೋರಿಸುತ್ತ) ಧೈರ್ಯವೆ! ನನ್ನ ಸಲುವಾಗಿ ಯಾವ ತರದ ಹೆದರಿಕೆಯೂ ಬೇಡ ಮನೋರಮೆಗೆ. ನಾನು ಹೋಗುವದನ್ನು ತಡೆದುಕೊಳ್ಳುವ ಧೈರ್ಯವು ನಿನ್ನಲ್ಲಿಲ್ಲವೆಂದು ನನಗೆ ಧೈರ್ಯದ ಬೆದರಿಕೆ ಹಾಕು ವಿಯಾ? ಇದೊ, ಧೈರ್ಯದಿಂದ ಹೋಗುವೆ, ನಗುತ್ತ ಹೋಗುವೆ.

ಮನೋರಮೆ:—(ಮೊದಲಿನಂತೆಯೆ, ಆದರೆ ಹೆಚ್ಚಿನ ಕೋಪಾವೇಶದಿಂದ) ನಗುವಿ ಯಂತೆ, ನಗುವಿಯಂತೆ! ಜನರೆಲ್ಲ ನಿನ್ನನ್ನು ನೋಡಿ ನಕ್ಕ ಮೇಲೆ ನೀನೂ ನಗುವಿಯಂತೆ! ಅಪರಾತ್ರಿಯಲ್ಲಿ ಬಂದು, ಒಬ್ಬ ಹೆಂಗಸನ್ನು ವಂಚಿಸಿ—

ವಿದ್ಯಾಧರ:— (ನಮುವೆಯೆ) ಹೆಂಗಸು! ಓಹೊ, ಹೆಂಗಸು ಅಲ್ಲವೆ ನೀನು? (ಖೊಳ್ಳೆಂದು ನಕ್ಕು) ನೋಡಿರಿ, ಹೆಂಗಸುತನದ ಅಭಿಮಾನ! ನಮ್ಮ ಮನೋರಮೆಯ ಹೆಂಗಸುತನದ ಅಭಿಮಾನ! ನಮ್ಮ ಹರಿಹರರಾಯನ ಹೆಂಡತಿಯ ಹೆಂಗಸುತನದ ಅಭಿಮಾನ! ಬೇಡಾದ ಗಂಡನ ಕೂಡ ಬೇಕಾದ ಹೆಂಗ ಸಿನಂತೆ ನಡೆದುಕೊಳ್ಳುವ ಈ ಹೆಣ್ಣುತನದ ಅಭಿಮಾನ! (ತಿರಸ್ಕಾರದಿಂದ) ನಾನು ಒಳಗೆ ಬರುವಾಗ್ಗೆ ನೀನು

ಹೆಂಗಸು ಇರಲಿಲ್ಲ, ನಾನು ಹೊರಗೆ ಹೋಗುವಾಗ್ಗೆ ಮಾತ್ರವೇ ನೀನು ಹೆಂಗಸು ಅಲ್ಲವೆ ?

ಮನೋರಮೆ:—(ತಡೆಯದೆ ಮುಖಮುಚ್ಚಿ ಬಿಕ್ಕುತ್ತ) ಅಯ್ಯೋ, ಇವನ ನಾಲಗೆ ಕಡಿದು ಬೀಳಬಾರದೆ ? (ಒಮ್ಮೆಲೆ ಮುಖ ತೆರೆದು, ಅವನನ್ನು ಕೆಲ ಹೊತ್ತು ದಿಟ್ಟಿಸಿ, ಹಾಸಿಗೆಯ ಮೇಲೆ ಕುಳಿತುಕೊಂಡು, ಗಂಭೀರವಾಗಿ) ಹೋಗು. ಹೇಡಿಯಂತೆ ಹೇಸಿ ಕೆಲಸ ಮಾಡಿ ಹೆಂಗಸಿನಂತೆ ಹೊರಬೀಳು. ನಾನು ನೋಡುವೆ. ನಗುತ್ತ ನೋಡುವೆ. (ಎದ್ದು ನಿಂತು) ಇನ್ನು ನಾನು ಹೆಂಗಸು ಅಲ್ಲ; ಹೆಂಗಸು ಆದರೆ ಹೆಸರು ಕೆಡಿಸಿಕೊಳ್ಳ ಬೇಕಾಗುವದು, ನಿನ್ನಂತಹಾ ಗಂಡಸಿನ ಸಹವಾಸ ದಿಂದ; ಹೆಂಗಸು ಆದರೆ ಜಾರಿಣಿ ಎನಿಸಿಕೊಳ್ಳಬೇಕಾಗು ವದು, ಅಪರಾತ್ರಿ ನೀನು ಬಂದದ್ದರಿಂದ; (ಮತ್ತೆ ಕುಳಿತು) ಹೋಗು. ಈ ಗಂಡು ಎದೆಯು ಕಲ್ಲಾಗಿ ನಿನ್ನನ್ನು—

ವಿದ್ಯಾಧರ:— (ಒಮ್ಮೆಲೆ ಮುಂದೆ ಬಂದು) ಮನೋರಮಾ, ಮನೋ ರಮಾ, ಇಲ್ಲದ ಸಂಶಯ ತರಬೇಡ, ಇಲ್ಲದ ಕಲ್ಪನೆ ಮಾಡಿಕೊಳ್ಳಬೇಡ. ( ಮನೋರಮೆಯು ಕೆಳಗೆ ನೋಡುತ್ತ ಕುಳಿತುಕೊಳ್ಳುವಳು). (ದೂರ ಸರಿದು) ಓಹೊ, ಮಾನ ಮರ್ಯಾದೆಯ ಹೆದರಿಕೆ ಹಾಕುವಿ ಅಲ್ಲವೆ ನನಗೆ ? ( ತಿರ ಸ್ಕಾರದಿಂದ) ತಿಳಿಯಿತು. ಹೆಂಗಸು ಅಲ್ಲವೆ ನೀನು ? ಆ ಹೆಂಗಸುತನದ—

ಮನೋರಮೆ:—(ಎದ್ದು ಸಿಟ್ಟಿನಿಂದ) ಅಹುದು; ಹೆದರಿಕೆ ಹಾಕುವೆ, ಕೂಗುವೆ; ನೀನು ನನ್ನ ಮರ್ಯಾದೆಯನ್ನು—

ವಿದ್ಯಾಧರ:— (ನಗುತ್ತ) ಓಹೊ, ಕೂಗು, ಕುತ್ತಿಗೆ ಕೊಳೆಯುವವರೆಗೆ

ಕೂಗು. ನಿನ್ನ ಮಾನಮರ್ಯಾದೆ ಕಳೆದುಕೊಳ್ಳುವ ಹೌಸು ನಿನಗಿದ್ದರೆ, ನಿನ್ನ ಮಾನಮರ್ಯಾದೆ ಮಾರಿ ಕೊಳ್ಳಲು ನಿನಗೆ ಆನಂದವಿದ್ದರೆ ಕೂಗು. ಆದರೆ—

ಮನೋರಮೆ:—(ತಿರಸ್ಕಾರದಿಂದ) ಆದರೆ—ಆದರೆ – ನಿನಗೆ ಅದರ ಗೊಡವೆ ಯೇನು ? ಮನೋರಮೆಯ ಮಾನ ಕಳೆದರೆ ವಿದ್ಯಾಧರ ನಿಗೇನು ? (ಅಣಕಿನಿಂದ) ಮನೋರಮೆಯ ಮೇಲೆ ಪ್ರೇಮವಿದೆಯೆಂದು ಹೇಳುವವನಿಗೆ ಮನೋರಮೆಯ ಮಾನದ ಪರಿವೆಯೇನು ?

ವಿದ್ಯಾಧರ:— (ಆಶ್ಚರ್ಯದಿಂದ) ಮನೋರಮೆಯ ಮೇಲೆ ಪ್ರೇಮ ! ಈ ಹುಚ್ಚು ಯಾರು ಹಾಕಿದರು ನಿನ್ನ ತಲೆಯಲ್ಲಿ ? (ನಕ್ಕು) ಪ್ರೇಮವಂತೆ! ಮನೋರಮಾ, ಮದಿವೆಯಿಂದ ಎಚ್ಚರಾದ ಮೇಲೆ ಪ್ರೇಮದ ಕನಸನ್ನು ಮರೆತುಬಿಡ ಬೇಕು, ತಿಳಿಯಿತೆ? ಪ್ರೇಮವಂತೆ ! (ಸುಳ್ಳು ಕನಿಕರದಿಂದ) ಹುಚ್ಚೀ, ನಿನ್ನ ಮೇಲೆ ನನ್ನ ಪ್ರೇಮವಿದೆಯೆಂದು ತಿಳಿ ದೆಯಾ ? ಹರಿಹರರಾಯನ ಹೆಂಡತಿಯ ಮೇಲೆ ವಿದ್ಯಾ ಧರನ ಪ್ರೇಮವೆ? ಛೆ. ಹುಚ್ಚಿ ನೀನು. ನಿನ್ನ ಮೇಲೆ ನನ್ನ ಪ್ರೇಮವಿದ್ದರೆ ಅದು ಮಾಯೆಯೆಂದು ತಿಳಿ, ಆಟ ವೆಂದು ತಿಳಿ, ಮಲಗಿದಾಗ್ಗೆ ಕಂಡ ಕನಸೆಂದು ತಿಳಿ. ಈಗ್ಗೆ ಎಚ್ಚತ್ತಿರುವಿ. (ಗಂಭೀರವಾಗಿ) ಕಣ್ಣು ತೆರೆದು, ಕಿವಿಗೊಟ್ಟು ಕೇಳು. ನಿನ್ನ ಮೇಲಿನ ಈ ವಿದ್ಯಾಧರನ ಪ್ರೇಮವು ಎಂದಿಗೊ ಹಾರಿ ಹೋಗಿದೆ. (ನಗುತ್ತ) ಇದು ನನ್ನ ಯುಕ್ತಿ; ಹೆಂಗಸರಿಂದ ಕೆಲಸ ಸಾಧಿಸಿಕೊಳ್ಳುವ ಗಂಡಸಿನ ಯುಕ್ತಿ. ಹಹಾ ! ಪ್ರೇಮವಂತೆ, ಪ್ರೇಮ! ನನ್ನ ಕೆಲಸವಾಯಿತು, ಇನ್ನು ನನ್ನ ಪ್ರೇಮವೂ

ಮಾಯವಾಯಿತು. (ಅರ್ಧ ತನ್ನೊಳಗೆ) ಪ್ರೇಮದ ಹುಚ್ಚು ಹಿಡಿಸಿದರೆ ಸಾಕು, ಹಾವುಗಾರನ ಹಾವಿನಂತೆ ಕುಣಿಸಬಹುದು ಈ ಹೆಂಗಸರನ್ನು. (ಹೊರಡುವನು).

ಮನೋರಮೆ:—(ಒಮ್ಮೆಲೆ ಅಡ್ಡಗಟ್ಟಿ) ಹಾವುಗಾರನ ಹಾವು ! ಹಾವು ಆದೆನಲ್ಲವೆ ನಾನು ? ಆಗಲಿ, ಹಾವಿನಂತೆ ಕಚ್ಚುವೆ, ಹಾವುಗಾರನ ಮುಂದೆ ವಿಷ ಕಾರುವೆ. (ಸಿಟ್ಟಿನಿಂದ) ಪ್ರೇಮದ ಹುಚ್ಚು ಹಿಡಿಸಿರುವೆಯೆಂದು ತಿಳಿದೆಯಲ್ಲವೆ, ಪ್ರೇಮದ ಹುಚ್ಚು ! ಹುಚ್ಚಿಯಂತೆ ಕುಣಿಯುವೆ, ಹುಚ್ಚಿಯಂತೆ ಕೂಗುವೆ, ಹದಿನಾಲ್ಕು ಲೋಕಗಳನ್ನೆಲ್ಲ ಎಚ್ಚರಿಸುವೆ. ಆ ಮೇಲೆ ನಿನ್ನ ಕಣ್ಣು ಹೇಗೆ ತೆರೆಯುವದು ನೋಡುವೆ. (ಅಣಕಿಸಿಂದ) ಹುಚ್ಚಿ ನಾನು, ನನಗೆ ಮಾನವಿಲ್ಲ, ಮರ್ಯಾದೆಯಿಲ್ಲ; ಹುಚ್ಚಿ ನಾನು, ನನಗೆ ಎರಡನೆಯವರ ಮಾನ–ಮರ್ಯಾದೆಯ ಪರಿವೆಯಿಲ್ಲ; ಹುಚ್ಚಿ ನಾನು, ಅದಕ್ಕೆಂದೇ ಒಬ್ಬ ಮಾನಗೇಡಿಯು ನನ್ನ ಮಾನವನ್ನು ಮೀರಿದನೆಂದು ಒದರುವೆ, ಚೀರುವೆ ಕೂಗುವೆ, ಕೀಸರಿಡುವೆ....

ವಿದ್ಯಾಧರ:— ಸ್ವಲ್ಪ ತಡೆ. ಕೂಗುವ ಮೊದಲು ನಿನಗೆ ಮರ್ಯಾದೆ ಯಿಲ್ಲದಿದ್ದರೂ ನನಗೆ ಮರ್ಯಾದೆಯಿದೆಯೆಂಬುದನ್ನು ಮರೆಯಬೇಡ. ನೀನು ಹುಚ್ಚಿಯಂತೆ ಕೂಗಿದರೆ ನಿನಗೆ ಕೂಗುವ ಹುಚ್ಚು ಹಿಡಿದಿದೆ ಎಂಬ ಚಿಕಿತ್ಸೆಯನ್ನು ಡಾಕ್ಟರನಾದ ನಾನು ಜಗತ್ತಿಗೆಲ್ಲ ಸಾರಿ ಹೇಳುವೆ. ( ತಿರಸ್ಕಾರದಿಂದ ) ಅಥವಾ ಇಷ್ಟೇಕೆ ನನ್ನದಾವರೂ ವಿಚಾರ ? ಕೂಗು, ಕೂಗು. (ಗಂಭೀರವಾಗಿ) ಆದರೆ ಒಂದು ಮಾತನ್ನು ಮರೆಯಬೇಡ. ಸಂಸಾರದಲ್ಲಿಯೂ

ಗಲಿ, ನಾಟಕದಲ್ಲಿಯಾಗಲಿ ಶುದ್ಧ ಅಂತಃಕರಣದಿಂದ ಪರಸ್ತ್ರೀಯಳ ಮನೆ ಸೇರಿದವರಲ್ಲಿ ಈ ವಿದ್ಯಾಧರನೆ ಮೊದಲಿನವನು.

(" ಅಲ್ಲ, ಈ ಕಾಮಿಯು ಮೊದಲಿನವನು " ಎಂದು ಒಮ್ಮೆಲೆ ಕಾಮಿಯು ಮುಂದೆ ಬರುವನು. ವಿದ್ಯಾಧರ, ಮನೋರಮೆ ಇಬ್ಬರೂ ಚಕಿತರಾಗುವರು. ವಿದ್ಯಾಧರನಂತೂ ಬೆದರಿ ಕಯ್ಯೊಳಗಿನ ಕಾಗದವನ್ನು ಚಲ್ಲುವನು. ತಟ್ಟನೆ ಅದನ್ನು ಮನೋರಮೆಯು ತೆಗೆದುಕೊಳ್ಳುವಳು. ಯಾರಿಗೂ ಏನೂ ತಿಳಿಯದೆ ಎಲ್ಲರೂ ದಂಗು ಬಡೆದು ಕೆಲಹೊತ್ತು ಸುಮ್ಮನಿದ್ದ ಮೇಲೆ, ತಾನು ಮಾತ್ರ ಬೆದರಿಲ್ಲವೆಂದು ತೋರಿಸುವವಳಂತೆಯೊ ಏನೊ—)

ಮನೋರಮೆ:—(ಸಿಟ್ಟಿನ ಮುಖಮುದ್ರೆಯಿಂದ) ಯಾರೊ? ಕಾಮೀ—

ಕಾಮಿ:— (ಹೆದರಿ) ಅಹುಹು-ದು: ನಾನೇ-ಕ್-ಕ್-ಕಾ-ಮ್ರಾ-ಯಾ-

ಮನೋರಮೆ: -- (ನಕ್ಕು) ಕಾಮ **ರಾಯ**ನಲ್ಲವೆ? ಮರೆತೇ ಬಿಟ್ಟೆ.

ಕಾಮಿ: — (ಮೊದಲಿನಂತೆ) ತ್–ತಪ್–ಪಾಯಿತು; ಕ್ಷಮಿಸಬೇಕು.

ಮನೋರಮೆ: —(ಹೊಯ್ಮಾಲಿತನದಿಂದ) ಕ್ಷಮಿಸುವೆ, ಕ್ಷಮಿಸಿದೆ. ಇದೇ ಬುದ್ಧಿಯನ್ನು ದೇವರು ಎಲ್ಲ ಗಂಡಸರಿಗೂ ಕೊಡಲಿ. (ಕಣ್ಣು ಮುಚ್ಚಿ ಕೈಮುಗಿಯುವಳು).

ವಿದ್ಯಾಧರ:— ( ಕೊನೆಗೆ ಗಾಬರಿಯಿಂದ ಎಚ್ಚತ್ತು ) ಓಹೊ ! ನಿನ್ನಂತಹ ಸಾಧ್ವಿಯರಿರುವರಲ್ಲ ತಮ್ಮ ಬುದ್ಧಿಯನ್ನು ಎರಡನೆಯವರಿಗೆ ಕೊಟ್ಟು ಬಿಡಲಿಕ್ಕೆ ! (ಗದ್ದರಿಸಿ) ಸಾಕು, ನನ್ನ ಮೋಸಮಾಡಬೇಕೆಂದೆಯಲ್ಲವೆ ? ನಿನ್ನ ಮರ್ಯಾದೆ ಮೀರಿದೆನೆಂದು ಕೂಗುವವಳಿದ್ದಿಯಲ್ಲವೆ ? ನಿನ್ನ ದುಷ್ಟ ಮನಸಿನ ಪಿಶಾಚಿಯಂತೆ ಇವನನ್ನು ಕೋಣೆಯೊಳಗಿಟ್ಟುಕೊಂಡು ಹಾದಿಗೆ ಹೋಗುವವರನ್ನು ಪಿಶಾಚಿಯೆನ್ನುವಿಯಲ್ಲವೆ ? ಆಗಲಿ, ನಾನು ಕೂಗುವೆ. ಇಲ್ಲವೆ ಕೊಡು ಆ ಕಾಗದವನ್ನು. ಬಂದಂತೆ ಹೋಗುವೆ.

ಮನೋರಮೆ:— (ಅವನ ಕಡೆಗೆ ಲಕ್ಷ್ಯವಿಲ್ಲದೆ, ಕಾಮಿಗೆ) ಕಾಮರಾಯಾ, ನಿನ್ನನ್ನು ಕ್ಷಮಿಸಿದೆನಲ್ಲವೆ ? ಅಪಸರದಿಂದ ಕ್ಷಮಿಸಿದ್ದಕ್ಕೆ ನಿನ್ನ ಕ್ಷಮೆ ಬೇಡುವೆ. (ಸೋಗಿನ ಸಿಟ್ಟಿನಿಂದ) ನಿನ್ನನ್ನು ಕ್ಷಮಿಸುವದೆ ? ಕೆಲಸವಿಲ್ಲದೆ ಪರಸ್ತ್ರೀಯಳ ಕೋಣೆಯನ್ನು ಹೊಕ್ಕ ನಿನ್ನನ್ನು ಕ್ಷಮಿಸುವದೆ ? ನೀಚನಿರುವಿ ನೀನು. ಶಾಪ ಕೊಡುವೆ, ಶಿಕ್ಷೆ ಕೊಡುವೆ ನಿನಗೆ, ಓದು ಇದನ್ನು. (ಎಂದು ಕಾಮಿಯ ಕಯ್ಯಲ್ಲಿ ಕಾಗದವನ್ನು ಕೊಡುವಳು. ವಿದ್ಯಾಧರನು ಅದನ್ನು ಕಸಿದುಕೊಳ್ಳಲು ಬರಲು, ಅವನನ್ನು ಕಯ್ಯಿಂದ ತಡೆದು) ಇದೇನು ? ಬಂದಂತೆ ಹೋಗುವೆಯೆಂದು ಹೇಳಲಿಲ್ಲವೆ ? ನಿನಗೆ ಸಹಾಯ ಮಾಡುವೆ. ಕಾಮರಾಯನು ಓದಲಿ, ನೀನು ಕೇಳು. ಆ ಮೇಲೆ ಬಂದಂತೆ ಹೋಗುವಿಯಂತೆ-ಮನಬಂದಂತೆ !

(ವಿದ್ಯಾಧರನು ಹಲ್ಲುಕಡಿಯುತ್ತ ಏನು ಮಾಡಬೇಕೆಂಬುದು ತಿಳಿಯದೆ ಸುಮ್ಮನಾಗಿ ನಿಂತುಬಿಡುವನು. ಮನೋರಮೆಯು ಅವನನ್ನೇ ನೋಡುತ್ತ ನಿಲ್ಲುವಳು. ಕಾಮಿಯು ಕಾಗದವನ್ನು ಬಿಚ್ಚಿ ತನ್ನಷ್ಟಕ್ಕೆ ಓದಿಕೊಂಡು ವಿಶ್ವಾಸಕೊಡದೆಂದು ತೋರಿಸಿ ಮತ್ತೊಮ್ಮೆ ಓದಿಕೊಂಡು-ಗಟ್ಟಿಯಾಗಿ ನಗುವನು. ಇಬ್ಬರೂ ಆಶ್ಚರ್ಯದಿಂದ ಅವನನ್ನು ನೋಡುವರು. ಕಾಮಿಗೆ ನಗೆ ತಡೆಯದುದನ್ನು ಕಂಡು ಮನೋರಮೆಯು ಸಿಟ್ಟು ತೋರಿಸುವಳು. ಗಾಬರಿಯಿಂದ ನಗೆ ತಡೆದು).

ಕಾಮಿ:— ಇದು....ಇದು.... ಇ-ದರಲ್ಲಿ· ·ಏನ್‌ನೂ ಇಲ್ಲ· ·ವ್‌ವ್‌ ಒಂದೇ ಮಾತು—

ಮನೋರಮೆ:—(ಸಿಟ್ಟಿನಿಂದ) ನಿನ್ನ ಮಾತು ಬೇಡ. ಓದು ಅದನ್ನು.

ಕಾಮಿ:— (ಅಧೈರ್ಯದಿಂದ) ಆಗಲಿ. (ಓದುವನು) "ಕೆಳಗೆ ಸಹಿ ಮಾಡಿದವನು, ಹರಿಹರರಾಯನು, ನಾನು—" ಅಂದರೆ, ಅವರೆ, ನಾ ಅಲ್ಲ—

ಮನೋರಮೆ:—(ಸಿಟ್ಟು ತಡೆಯದೆ) ಓದು—ಓದು.

ಕಾಮಿ:— (ಹೆದರಿ ಅವಸರದಿಂದ ಓದುವನು) "ಕೆಳಗೆ ಸಹಿ ಮಾಡಿದವನು, ಹರಿಹರರಾಯನು, ನಾನು ಬರೆದಿಟ್ಟ ಸಂಗತಿಯು; ನನ್ನ ಮರಣದವರೆಗೆ ಯಾರಿಗೂ ತಿಳಿಯಬಾರದೆಂದು, ಇದ್ದ ಸಂಗತಿಯನ್ನು, ಈ ಹೊತ್ತು, ಇಲ್ಲಿ ನನ್ನ ಸದಸದ್ವಿವೇಕ ಬುದ್ಧಿಯ ಸಮಾಧಾನಕ್ಕಾಗಿ ಬರೆದಿಟ್ಟಿದ್ದೇನಂದರೆ:— **ವಿದ್ಯಾಧರನು ನನ್ನ ಮಗನು, ಅವನ ತಾಯಿಯು ನನ್ನ ಮದಿವೆ ಆಗದ ಹೆಂಡತಿ.**"

( ಮನೋರಮೆಯೂ ವಿದ್ಯಾಧರನೂ ಒಮ್ಮೆಲೆ ಆಂ ಎಂದು ಗಾಬರಿಯಿಂದ ನೋಡುವರು. ವಿದ್ಯಾಧರನು ಒಮ್ಮೆಲೆ ಕಾಗದವನ್ನು ಕಸಿದುಕೊಂಡು ಓದಿ ಗಟ್ಟಿಯಾಗಿ ಹಣೆಬಡೆದುಕೊಂಡು ಅಯ್ಯೋ ಎಂದು ಕೂಗಿ ತಲೆ ಹಿಡಿದುಕೊಳ್ಳುವನು. ಮನೋರಮೆಯು ಏನೂ ತಿಳಿಯದಂತಾಗಿ ಹಾಸಿಗೆಯ ಮೇಲೆ ಕುಳಿತುಕೊಳ್ಳುವಳು ).

ಕಾಮಿ:— ( ವಿದ್ಯಾಧರನಿಗೆ ) ಓಹೊ, ಹೇಗಾಯಿತು ? ಎರಡನೆಯ ಹೆಂಗಸರನ್ನು ಕಾಡಿದರೆ ಹೀಗೆಯೆ ಆಗುವದೆಂದು ಕಾವ್ಯದಲ್ಲಿ ಹೇಳಿದ್ದು ಸುಳ್ಳಲ್ಲ. ( ನಗುತ್ತ ) ಅಹಹಾ, ಮೋಹಿನಿಯನ್ನು ಮದಿವೆ ಆಗುವೆಯಾ ? ಛೆ, ನಿನಗೇಕೆ ಮದಿವೆಯ ಹುಚ್ಚು ? ನಿಮ್ಮ ತಾಯಿಯ ಮದಿವೆ ಕೂಡ ಆಗಿಲ್ಲ. ನಿಮ್ಮ ಮನೆತನದಲ್ಲಿಯೆ ಮದಿವೆ ಇಲ್ಲ. ( ಎಂದು ಗಟ್ಟಿಯಾಗಿ ನಗುವನು. ಮನೋರಮೆಯು ಕುಳಿತಲ್ಲಿಯೆ "ಬಾಯಿ ಮುಚ್ಚು" ಎಂದು ಗದ್ದರಿಸುವಳು. ಇಷ್ಟರಲ್ಲಿ ಕಣ್ಣು ಒರೆಸಿಕೊಳ್ಳುತ್ತ ತಿಮ್ಮಾಜಿಯು ಬರುವನು ).

ತಿಮ್ಮಾಜಿ:— ಬಂದೆ, ರಾಯರೆ, ಬಂದೆ. ಖೋಡಿ ನಿದ್ದೆಯು— ( ಮುಂದೆ ನೋಡಿ ) ಎಲ! ಇದೇನು ! ಕಾಮಿ ! ವಿದ್ಯಾಧರ! ಏನು ? ಆಗಿದೆ ಏನು ?

ಕಾಮಿ:— ( ನಗೆ ತಡೆಯುತ್ತ ) ಮ್ಯ್ಯಾ—ಹು—ತ್ರ—ಪ—ಹ—ಹ—ತ್ರ—ಹಹ

ತಿಮ್ಮಾಜಿ:— ( ಸಿಟ್ಟಿನಿಂದ ) ಹಲ್ಲು ಕಿರಿಯುವಿಯೇನೊ ?

ವಿದ್ಯಾಧರ:— (ಮುಂದೆ ಬಂದು) ನಾನು ಹೇಳುವೆ. ಮೃತ್ಯುಪತ್ರ. (ಉಸುರ್ಗರೆದು) ನಿಜ. ವಿದ್ಯಾಧರನನ್ನು ಮೃತ್ಯುವಿನ ಬಾಯಿಯಲ್ಲಿ ಬಿಸಾಡುವ ಪತ್ರ. (ಎಂದು ಪತ್ರವನ್ನು ತಿಮ್ಮಾಜಿಗೆ ಕೊಡುವನು).

ತಿಮ್ಮಾಜಿ:— (ಅದನ್ನು ಓದಿ ಬೆಪ್ಪನಂತೆ) ಎಲ – ಇದೇನು – ನಿನ್ನ – ಕಯ್ಯೊಳಗೆ – ಹೇ........

ವಿದ್ಯಾಧರ:— (ಅದನ್ನು ಕಸಿದುಕೊಂಡು ಸಿಟ್ಟಿನಿಂದ) ನನ್ನ ಕಯ್ಯೊಳಗೆ–ನನ್ನ ಕಯ್ಯೊಳಗೆ. (ಉದ್ವೇಗದಿಂದ) ಅಯ್ಯೊ, ಅಯ್ಯೊ, ವಿದ್ಯಾಧರಾ, ಇದು ನೋಡು. ಕ್ರೂರ ಸಮಾಜವು ನಿನ್ನ ಸೇಡು ತೀರಿಸುವದನ್ನು ನೋಡು. (ಹಲ್ಲು ಕಚ್ಚಿ ಅಣಕಿಸುತ್ತ) ಮಾಡುವಿಯೇನು? ಆಗುವದೇನು ನಿನ್ನ ಕಯ್ಯಿಂದ? ನಿನ್ನ ಹುಟ್ಟು–ಸಾವುಗಳನ್ನು ತನ್ನ ಮುಷ್ಟಿಯೊಳಗೆ ಮುಚ್ಚಿಡುವ ಈ ಸಮಾಜದ ಮುಂದೆ ಮಾಡುವಿಯೇನು?

ಮನೋರಮೆ:—(ಕಳಕಳಿಯಿಂದ) ವಿದ್ಯಾಧರಾ, ವಿದ್ಯಾಧರಾ, ಇದೇನು? ಸಮಾಧಾನ ತಾಳು.

ವಿದ್ಯಾಧರ:— (ಉದ್ವೇಗದಿಂದ) ವಿದ್ಯಾಧರ! ಇನ್ನೆಲ್ಲಿಯ ವಿದ್ಯಾಧರ! ನನ್ನ ಹೆಸರು ಬೇಡ ನಿನ್ನ ನಾಲಗೆಯ ಮೇಲೆ. ಹೆಸರು ಹೇಳಲಾರದ ಈ ಹೇಸಿಯ ಹೆಸರು ಬೇಡ ನಿನ್ನ ನಾಲಗೆಯ ಮೇಲೆ. ಹೆಸರು ಹೇಳಲಾರದಂತಹ ಪಾಪದ ಹೊಲಸಿನಲ್ಲಿ ಹುಟ್ಟಿದ ಈ ಹುಳದ ಹೆಸರು ಬೇಡ ನಿನ್ನ ನಾಲಗೆಯ ಮೇಲೆ. ನನಗೆ ಪಾಪಿಯೆಂದು ಕರೆಯಲಿಲ್ಲವೆ? ಮನೋರಮಾ, ನಾನು ಪಾಪಿ. ಪಾಪದ ರಾಶಿ ನಾನು. ಪಾಪಿಗಳು ತಮ್ಮ ಪಾಪವನ್ನು ಬಚ್ಚಿಟ್ಟ

ಬುಟ್ಟಿ ನಾನು. ನೋಡು, ಮನೋರಮಾ, ನನ್ನ ಕಡೆಗೆ ನೋಡು. ನನ್ನ ಪರಿಚಯವಿದೆಯೆ ? ಹೇಳು. ನನ್ನನ್ನು- ( ಒಮ್ಮೆಲೆ ವಿಕಾರವಾಗಿ ನಕ್ಕು ) ಇಲ್ಲ, ಇಲ್ಲ. ನಿನಗೆ ನನ್ನ ಪರಿಚಯವಿಲ್ಲ. (ಎದೆಯುಬ್ಬಿಸಿ) ಮಾಡಿಕೊಡುವೆ ನನ್ನ ಪರಿಚಯವನ್ನು. ನಾನು ನಾನೇ. ಹೆಸರಾದ ತಂದೆ ನನಗೆ; ನನ್ನ ಹೆಸರು ನಾನು. ಹೆಸರು ಕೆಡಿಸಿದ ತಾಯಿ ನನಗೆ; ನನ್ನ ಹೆಸರು ನಾನು. ನನ್ನ ತಂದೆ ಹರಿಹರ- ( " ಅಲ್ಲ " ಎಂದು ಒಮ್ಮೆಲೆ ಚೀರಿ ತಲೆ ಜಾಡಿಸುತ್ತ ) ಅಲ್ಲ, ಅಲ್ಲ, ಅಲ್ಲ. ನನ್ನ ತಂದೆತಾಯಿಗಳಿಗೂ ಹೆಸರಿಲ್ಲ. ತಾಯಿಯ ಹೆಸರನ್ನು ತಂದೆ ಕೆಡಿಸಿದ; ತಂದೆಯ ಹೆಸರನ್ನು ತಾ-ತಾಯಿ ಕೆಡಿಸಿದಳು. ( ಹಣೆಗೆ ಕೈಹಚ್ಚಿ ಕೆಲ ಹೊತ್ತು ನಿಂತು) ಯಾಕೆ, ಕಾಯೀ, ನಗೆ ತಡೆಯುವಿ ಯಾಕೆ ? ನಾನೂ ನಗುವೆ, ನೀನೂ ನಗು. ನಗುವಂತಹ ವಿಷಯವೆ ಇದು. ( ಎಂದು ಗಟ್ಟಿಗಟ್ಟಿಯಾಗಿ ನಗುವನು. ನಗೆ ತಡೆಯದೆ ಸಂಕಟದಿಂದ ನರಳುವನು. ಮನೋರಮೆಯು ಒಮ್ಮೆಲೆ ಎದ್ದು ಅವನ ತಲೆಯನ್ನು ತನ್ನ ಎದಭುಜದಮೇಲಿಟ್ಟು ಬಲಗಯ್ಯಿಂದ ಅವನ ಬೆನ್ನು ಚಪ್ಪರಿಸುವಳು. " ವಿದ್ಯಾಧರಾ " ಎನ್ನುವಷ್ಟರಲ್ಲಿ ತಾನೇ ಬಿಕ್ಕುತ್ತ ಮುಖಮುಚ್ಚಿಕೊಳ್ಳುವಳು ).

ತಿಮ್ಮಾಜಿ:— ( ಮುಂದೆ ಬಂದು ಕಳಕಳಿಯಿಂದ ) ವಿದ್ಯಾಧರಾ, ವಿದ್ಯಾಧರಾ, ಏನಿದು ಹುಚ್ಚನಂತೆ ? ಎಷ್ಟಾದರೂ ಹುಡುಗ ನೀನು ! ವೈದ್ಯನೆಂಬ ಹೆಮ್ಮೆ ನಿನಗೆ. ಛೀ, ಹುಚ್ಚಾ, ಎಲ್ಲರಿಗೂ ಔಷಧ ಕೊಡುವಿ, ನಿನ್ನ ಔಷಧ ನಿನಗೆ ಗೊತ್ತಿಲ್ಲ. ನೀನೆಂತಹ ವೈದ್ಯ ! ಇದೊ, ಸಂಸಾರವನ್ನು ಅನುಭವಿಸಿದ ಈ ಮುದುಕನು **ವೈದ್ಯರಾಜ** ನಿರುವ,

**ವೈದ್ಯರಾಜ.** ನನ್ನ ಔಷಧದ ಒಂದೇ ಗುಳಿಗೆಗೆ, ಎಲ್ಲ ಬೇನೆಯೂ ಹಾರಿಹೋಗುವದು. ಕೇಳು, ಕೇಳು. **ಬೇಡಾದದ್ದನ್ನು ಮರೆತುಬಿಡು, ಉಳಿದದ್ದೆಲ್ಲ ತಾನೇ ಬೇಕಾಗುವದು.**

ವಿದ್ಯಾಧರ:— ( ಮನೋರಮೆಯಿಂದ ಮೆಲ್ಲನೆ ದೂರಸರಿದು ಕಣ್ಣೀರು ಒರೆಸಿ ಕೊಳ್ಳುತ್ತ ತಿಮ್ಮಾಜಿಯನ್ನು ದಿಟ್ಟಿಸಿ ಆಶ್ಚರ್ಯದಿಂದ ) ಮರೆತು ಬಿಡು ! ಏನನ್ನು ಮರೆಯುವದು ? ವೈದ್ಯರಾಜ, ಏನನ್ನು ಮರೆಯುವದು ? ನಾನು ಹುಟ್ಟಿದ್ದನ್ನೆ ಮರೆಯುವದೆ ? ನಾನು ಬೆಳೆದದ್ದನ್ನೆ ಮರೆಯುವದೆ ? ನಡುನದಿಯಲ್ಲಿ ಸಿಕ್ಕವನಿಗೆ ದಂಡೆಮುಟ್ಟುವ ಔಷಧವನ್ನು ಹೇಳುವಿರಲ್ಲ, ವೈದ್ಯರಾಜ, ದಂಡೆಮುಟ್ಟುವ ಔಷಧವನ್ನು ಹೇಳುವಿರಲ್ಲ! ನೀವು ವೈದ್ಯರಾಜರು; ನಾನೊಬ್ಬ ಬಡವೈದ್ಯ. ಬಡವೈದ್ಯನು ಕೇಳುವ, ವೈದ್ಯರಾಜ, ನಿಮಗೆ ಈ ಬಡವೈದ್ಯ ಕೇಳುವ: ಒಂದು ವೇಳೆ ತಿಳಿಯಲಾರದೆ ಮೋಹಿನಿಯನ್ನು ಮದಿವೆಯಾಗಿದ್ದರೆ, ಒಂದೇ ರಕ್ತವು ಹರಿದಾಡುವ, ನಮ್ಮಿಬ್ಬರ ಸ್ಥಿತಿಯು ಏನಾಗುತ್ತಿತ್ತು ಹೇಳಬಲ್ಲಿರಾ, ವೈದ್ಯರಾಜ, ಏನಾಗುತ್ತಿತ್ತು ಹೇಳಬಲ್ಲಿರಾ ? ಒಂದೇ ಜಾತಿಯ ಮೋಡಗಳು ಒಂದನ್ನೊಂದು ಅಪ್ಪಿಕೊಂಡರೆ ಏನಾಗುವದು ಹೇಳುವಿರಾ, ವೈದ್ಯರಾಜರೆ?

ತಿಮ್ಮಾಜಿ:— ( ಹಿರಿತನದಿಂದ ) ಸಾಕು, ಸಾಕು. ಹುಚ್ಚನಂತೆ ಮಾತಾಡಬೇಡ. ಹುಡುಗನಂತೆ ಮಾಡಬೇಡ. ಮರೆಯುವದೆಂದರೆ ಮರೆಯುವದು.; ಎಲ್ಲವನ್ನೂ ಮರೆಯುವದು.

ಮೋಹಿನಿಯ ಕೂಡ ಮದಿವೆಮಾಡಿಕೊಳ್ಳುವದು ಎಲ್ಲಿಯ ಹಟ ?

( “ ಯಾಕೆ, ನನ್ನದಂತೂ ಅದೇ ಹಟ ” ಎಂದು ಮುಗುಳು ನಗೆ ನಗುತ್ತ ಹರಿಹರರಾಯನು, ಅವನ ಹಿಂದೆ ನಿದ್ದೆ ತಡೆದುದರಿಂದಲೂ ನಾಚಿಕೆಯಿಂದಲೂ ಕೆಂಪೇರಿದ ಮುಖದ ಮೋಹಿನಿಯು ಬರುವರು )

ಹರಿಹರ:— ( ನಗುತ್ತ ) ನನ್ನ ಹಟ. ( ಮೋಹಿನಿಯು ಬಾಗಿಲನಲ್ಲಿಯೆ ನಿಂತುದನ್ನು ನೋಡಿ “ ಯಾಕೆ, ನಮ್ಮ ಸ್ವತಂತ್ರ ಹುಡುಗೆಯು ನಾಚಿದಳೇನು ಇಷ್ಟರಲ್ಲಿ ? ” ಎಂದು ಅವಳನ್ನು ಕರೆದುಕೊಂಡು ಬರುವಷ್ಟರಲ್ಲಿ ಮನೋರಮೆಯು ವಿದ್ಯಾಧರನ ಕೈಯೊಳಗಿನ ಕಾಗದವನ್ನು ಕಸಿದುಕೊಂಡು ಕಾಮಿಯ ಕೈಯ್ಯಲ್ಲಿ ಕೊಡುವಳು). ತಿಮ್ಮಾಜಿ, ಇದೇನು ಸಂಚು ನಡೆಸಿರುವಿರಿ? ವಿದ್ಯಾಧರಾ, ಇವರೆಲ್ಲ ಕೂಡಿ ನಿನ್ನ ಮನಸ್ಸನ್ನು ತಿರುಗಿಸುವರೇನು ? ಆಗಲಿ, ಪ್ರಸಂಗ ಬಂದಿದೆ ಹೇಳಿಬಿಡುವೆ. ( ಉದಾಸೀನತೆಯಿಂದ ) ಇದೊ, ಆಯುಷ್ಯದಲ್ಲಿ ಇದೊಂದೇ ಮನೋರಥವು ಹಾಗೆಯೆ ಉಳಿದಿದೆ. ತಿಮ್ಮಾಜಿಯು ನಿನಗೆ ಹೇಳಿದರೂ ಹೇಳಿರಬಹುದು. ಮೋಹಿನಿಯನ್ನು ವಿದ್ಯಾಧರನಿಗೆ ಮದಿವೆ ಮಾಡಿಕೊಡುವದು ನನ್ನ ಬಲವಾದ ಇಚ್ಛೆಯೆಂದು.

ಕಾಮಿ:— ( ಸಂಶಯದಿಂದ ) ಇದು ನಿಮ್ಮದೇ ಇಚ್ಛೆಯೆ ?

ಹರಿಹರ:— ( ನಗುತ್ತ ) ಯಾಕೆ, ಕಾಮಿಗೆ ಸಂಶಯವೆ ? ನನ್ನದೇ ಇಚ್ಛೆ. ಯಾಕೊ, ಕಾಮೀ, ತನ್ನ ಹುಡುಗೆಯ ಮದಿವೆಯ ಚಿಂತೆಯು ತಂದೆಗೆ ಇಲ್ಲದೆ ಮತ್ತಾರಿಗಿರುವದೊ ? ವಿದ್ಯಾಧರಾ, ಮೋಹಿನಿಯು ಇನ್ನೂ ಚಿಕ್ಕವಳೆಂದು ನಾನು ಆ ವಿಷಯ ಮಾತನಾಡಿಲ್ಲ. ನಾನು

ಹಳೆ ಪದ್ಧತಿಯವನಲ್ಲ, ಹುಚ್ಚು ವಿಚಾರದವನಲ್ಲ. ಬಾಲ ವಿವಾಹದಂತಹ ಅನರ್ಥವು ಯಾವದೂ ಇಲ್ಲವೆಂದು ನನ್ನ ಪ್ರಾಮಾಣಿಕ ಮತ. ಮದಿವೆಯದೇನೂ ಅವಸರ ವಿಲ್ಲ. ಆದರೂ— ( ಭಾಷಣದ ಭರವನ್ನು ತಡೆದು ಎಲ್ಲರನ್ನೂ ನೋಡಿ ಆಶ್ಚರ್ಯದಿಂದ ) ಎಲ ! ಇದೇನು ! ಎಲ್ಲರೂ ದಂಗುಬಡಿದವರಂತೆ ನಿಂತಿರುವಿರಲ್ಲ !

ಮನೋರಮೆ:—ಒಮ್ಮೆಲೆ ನೀವು ಮೋಹಿನಿಯ ಮದಿವೆಯ ಮಾತ ನಾಡುವದನ್ನು ಕೇಳಿ—

ಹರಿಹರ:— ( ನಕ್ಕು ಸಮಾಧಾನದಿಂದ ) ಇಷ್ಟೆ ಅಹುದಲ್ಲೊ. ಮಾತ ನಾಡದಿದ್ದರೂ ಮೊದಲಿನಿಂದಲೂ ಈ ವಿಚಾರವು ನನ್ನ ತಲೆಯಲ್ಲಿದೆ.

ಕಾಮಿ:— ( ಸುಮ್ಮನಿರಬಾರದೆ ಮಹಾರಾಯಾ ! ) ಅದಕ್ಕಾಗಿಯೆ ಎಲ್ಲರಿಗೆ ಆಶ್ಚರ್ಯ.

ಹರಿಹರ:— ( ನಿದ್ದೆಗೆಟ್ಟವರಂತೆ ಸಿಟ್ಟಿಗೆದ್ದು ) ಅದಕ್ಕೇಕೆ ಆಶ್ಚರ್ಯವಾಗ ಬೇಕು ! ( ಹಟದ ಹುಡುಗನಂತೆ ) ಮೋಹಿನಿಯು ನನ್ನ ಮಗಳು. ಅವಳ ಮದಿವೆಯ ವಿಚಾರ ನನ್ನದು. ವಿದ್ಯಾ ಧರನ ಯೋಗ್ಯತೆ ನನಗೆ ಗೊತ್ತಿದೆ. ಅವನ ವಿಷಯ ವಾಗಿ ಯಾರಿಗೆ ಗೊತ್ತು ನನ್ನಷ್ಟು ? ಅವನೇ ಅಳಿಯ ನಾಗಬೇಕೆಂಬ ಆಶೆ ನನಗಿದೆ. ಅವನೇ ನನಗೆ ಸರಿ ತೋರುವ. ಯಾರು ಏನೆಂದರೂ ನನಗೆ ಗೊತ್ತಿದೆ ಅವನ ವಿಷಯವಾಗಿ ಎಲ್ಲ. ಅವನಿಗೇ ನನ್ನ ಮಗಳನ್ನು ಕೊಡುವೆ. ಆಶ್ಚರ್ಯಬಡುತ್ತ ಕೂಡಿರಿ ನೀವೆಲ್ಲ.

ಕಾಮಿ:— ಎಲ್ಲವೂ ಗೊತ್ತಿದ್ದವರಿಗೆ ಇದನ್ನು ಬರೆದವರು ಯಾರು

ಗೊತ್ತಿರಬಹುದಲ್ಲವೆ ? (ಎಂದು ಮನೋರಮೆಯು ''ಕಾಮೀ'' ಎಂದು ತಡೆಯುವಷ್ಟರಲ್ಲಿ ಕಾಗದವನ್ನು ಹರಿಹರರಾಯನ ಕಯ್ಯಲ್ಲಿ ಕೊಡುವನು.)

ಹರಿಹರ:— ( ಅದನ್ನು ಕಸಿದುಕೊಳ್ಳುತ್ತ ಓದುವ ಮುಂಚಿತವಾಗಿ) ನನ್ನ ಕೈ ಬರೆಹ. ( ಹೆಮ್ಮೆಯಿಂದ ) ನಾನೇ ಬರೆದವ. ( ಎಂದು ಓದಿಕೊಂಡು ಒಮ್ಮೆಲೆ ) ಎಲ! ಎಲ! ಇದು ನಿಮ್ಮ ಕೈ........ ( ಮುಂದೆ ಮಾತುಸಾಲದೆ ಹಣೆಹಣೆ ಬಡೆದುಕೊಂಡು ) ಅಯ್ಯೋ ಸತ್ತೆ ( ಎಂದು ತತ್ತರಿಸುವನು )

(ವಿದ್ಯಾಧರನು '' ವೈದ್ಯರಾಜ '' ಎಂದು ತನ್ನ ಕಡೆಗೆ ನೋಡಲು ತಿಮ್ಮಾಜಿಯು ಮುಖತಗ್ಗಿಸುವನು. ಮನೋರಮೆಯು ಗಂಡನನ್ನು ಹಿಡಿಯುವಳು. ಕಾಮಿಯು ಬಂದ ಹಾದಿಯಿಂದ ಓಡಿಹೋಗುವನು. ಇದೊ, ಬಿದ್ದಿತು ನೋಡಿ, ಹರಿಹರ ರಾಯನ ವೈಭವ ಕಳಸದಂತೆ, ಮನೋಭೀತಿಯ ಕರಾಳ ಸ್ವರೂಪದ ನೆರಳಿನಂತೆ-)

( ತೆರೆ ).

## ನಾಟಕವು ಮುಗಿಯಿತಲ್ಲವೆ ?